ಶ್ರೀ ಜಗದ್ಗುರು ಶಿವಾಚಾರ್ಯ ಸ್ವಾಮಿ ಜ್ಞಾನಭಂಡಾರ ...-93

# ' ಲೋಕಾರಾಧ್ಯ ಬಸವಣ್ಣ '

ಭಾಗ—೨

ಗ್ರಂಥಕರ್ತರು :


ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ
ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ
ಮಹಾಸ್ವಾಮಿಗಳವರು
(ಕಾವ್ಯತೀರ್ಥ, ಸಾಹಿತ್ಯ-ವೇದಾಂತಾಚಾರ್ಯ ಇತ್ಯಾದಿ ಪದವೀಧರರು)



ಪ್ರಕಾಶಕರು:
ಗುರುಭಕ್ತಚಂದ್ರ
ಎಂ. ಸಿ. ನಂಜಪ್ಪನವರು, ದಾವಣಗೆರೆ.





೧೯೬೯


ಬೆಲೆ ೧ ರೂಪಾಯಿ.

# ಅರ್ಕಾರಾಧ್ಯ ಬಸವಣ್ಣ

## ಭಾಗ—೨

ಗ್ರಂಥಕರ್ತರು :
ಶ್ರೀಶೈಲ ಸೂರ್ಯ ಸಿಂಹಾಸನಾಧೀಶ್ವರ
ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ
ಮಹಾಸ್ವಾಮಿಗಳವರು.
(ಕಾವ್ಯತೀರ್ಥ, ಸಾಹಿತ್ಯ-ವೇದಾಂತಾಚಾರ್ಯ ಇತ್ಯಾದಿ ಪದವೀಧರರು)

ಪ್ರಕಾಶಕರು:
ಗುರುಭಕ್ತಿಚಂದ್ರ
ಡಾ॥ ಎಂ. ಸಿ. ನಂಜಪ್ಪನವರು, ದಾವಣಗೆರೆ

೧೯೬೯

ಬೆಲೆ ೧ ರೂಪಾಯಿ.

# ಮೊದಲ ಮಾತು.

ಶ್ರೀಜಗದ್ಗುರು ಪಂಚಾಚಾರ್ಯರ ಬಗೆಗೂ, ಬಸವಾದಿ ಶಿವಶರಣರ ಬಗೆಗೂ ಜಗತ್ತಿನಲ್ಲಿ ನಡೆದಿರುವ ಅಸತ್ಯ ಪ್ರಚಾರವನ್ನು ಕಣ್ಣಾರೆ ಕಂಡು ಇದನ್ನು ಸಾಧ್ಯವಿದ್ದಷ್ಟೂ ಪರಿಹರಿಸಬೇಕೆಂದು ಶ್ರೀ ಸನ್ನಿಧಿಯು ಪ್ರಯತ್ನ ಪಟ್ಟುದು ಅಖಂಡ ಪ್ರಪಂಚಕ್ಕೇನೇ ಗೊತ್ತಿದೆ. ಆ ಬಗೆಗೆ ಯಾವ ಪ್ರಶಂಸೆಯೂ ನಮಗೆ ಅನಾವಶ್ಯಕ.

ಮಹಾತ್ಮರಾದ ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಆರಂಭವು ಎಲ್ಲಿಂದ? ಹೇಗೆ? ಆಯಿತೆಂಬುದು ಬಹುಜನರಿಗೆ ಗೊತ್ತಿಲ್ಲ. ಶ್ರೀ ಸನ್ನಿಧಿಯು ಬೆಂಗಳೂರಿನಲ್ಲಿ ಮುಕ್ಕಾಮು ಮಾಡಿದಾಗ ಪುರಂದರ ದಾಸರ ಶತಮಾನೋತ್ಸವದಿಂದ ಕನ್ನಡನಾಡಿನ ಮೇಲೆ ಆಗಿರುವ ಸತ್ಪ್ರಭಾವವು ಶ್ರೀ ಸನ್ನಿಧಿಯನ್ನು ಒಮ್ಮೆಲೇ ಜಾಗ್ರತಗೊಳಿಸಿ, ಇದೇ ರೀತಿಯಲ್ಲಿ ಬಸವಣ್ಣನವರ ಎಂಟನೆಯ ಶತಮಾನೋತ್ಸವವನ್ನೂ ಮಾಡಿದರೆ ಒಳ್ಳೆಯದಾಗಬಹುದಲ್ಲವೆ? ಎಂಬಪ್ರಶ್ನೆ ಮುಂದೆಬಂದು ನಿಂತಿತು. ಎರಡನೆಯ ದಿನ ಶ್ರೀ ಸನ್ನಿಧಿಯ ಅಧ್ಯಕ್ಷತೆಯಲ್ಲಿ ಏರ್ಪಡಿಸಿದ್ದ ಮಹಾಸಭೆಯಲ್ಲಿ ಯಾರಾದರೂ ಸಮಾಜ ಮುಖಂಡರು ಬಸವಣ್ಣನವರ ಎಂಟನೆಯ ಶತಮಾನೋತ್ಸವದ ಸಮಿತಿಯನ್ನು ರಚಿಸಿದರೆ ಶ್ರೀ ಸನ್ನಿಧಿಯು ಮೊದಲನೆಯದಾಗಿ ಒಂದುಸಾವಿರ ರೂಪಾಯಿಗಳನ್ನು ಆಶೀರ್ವದಿಸುವುದಾಗಿ ಬಹಿರಂಗಪಡಿಸಿತು. ಆಗ ಮಾನ್ಯ ಮಂತ್ರಿಗಳಾದ ಶ್ರೀ ಬಿ. ಡಿ. ಜತ್ತಿಯವರು ಈ ವಿಚಾರವನ್ನು ಶಿರಸಾ ಮಾನ್ಯಮಾಡಿ ಸಮಿತಿಯನ್ನು ಕಟ್ಟಲು ಮುಂದಾದರು. ಮತ್ತು ಅದೇ ಸಭೆಯಲ್ಲಿ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು. ಈ ಸಮಿತಿಯ ರಚನೆಯಿಂದ ವಿಶ್ವದ ಎಲ್ಲ ಕಡೆಗೂ ಬಸವಣ್ಣನವರ ಸತ್ಯಚರಿತ್ರೆಯ ಜೊತೆಗೆ ಇತರ ಶರಣರ ಮತ್ತು ಅವರಿಗೂ ಹಿಂದಿನವರಾದ ಪುರಾತನರ, ಅವರಿಂದಾಚೆಯುವರಾದ ಶ್ರೀಜಗದ್ಗುರು ಪಂಚಾಚಾರ್ಯರ ಕಥೆ, ಇತಿಹಾಸ ಮೊದಲಾದವುಗಳು ಅನೇಕ ಕವಿ ಪಂಡಿತರ ಶ್ರಮದಿಂದ ಹೊರಗೆ ಬಂದು ಮಹೋಪಕಾರವಾಗಿದೆ.

ಅದರಲ್ಲಿಯೇ ನಮ್ಮ "ಲೋಕಾರಾಧ್ಯ ಬಸವಣ್ಣ" ಕೃತಿಯೂ ಒಂದು. ಶ್ರೀ ಸನ್ನಿಧಿಯು ಕೇವಲ ಈ ಗ್ರಂಥವನ್ನು ರಚಿಸಿ ಸುಮ್ಮನಿರಲಿಲ್ಲ. ಗಣಿಲರ

ಯುಗಾದಿಯದಿನ ಶ್ರೀಶೈಲ ಮಹಾಕ್ಷೇತ್ರದಲ್ಲಿ ಶ್ರೀಜಗದ್ಗುರು ಪಂಚಾಚಾರ್ಯರ ಯುಗಮಾನೋತ್ಸವವನ್ನೂ, ಲೋಕಾರಾಧ್ಯ ಬಸವಣ್ಣನವರ ಎಂಟನೆಯ ಶತಮಾನೋತ್ಸವವನ್ನೂ ಮಾನ್ಯಮಂತ್ರಿಗಳಾದ ಶ್ರೀಮಾನ್ ಬಿ. ಡಿ. ಜತ್ತಿಯವರ ಅಧ್ಯಕ್ಷತೆಯಲ್ಲಿ ವೈಭವದಿಂದ ನೆರವೇರಿಸಿತು. ಆಗ ಲೋಕಾರಾಧ್ಯ ಬಸವಣ್ಣ ಗ್ರಂಥದ ಕನ್ನಡ ಪ್ರತಿಯ ಉದ್ಘಾಟನೆಯು ಮೈಸೂರು ಮಾಜಿ ಮುಖ್ಯಮಂತ್ರಿ ಶ್ರೀ ಕೆ. ಹನುಮಂತಯ್ಯನವರ ಹಸ್ತದಿಂದಲೂ, ತೆಲುಗು ಪ್ರತಿಯ ಉದ್ಘಾಟನೆಯು ಕೇಂದ್ರ ಉಕ್ಕುಗಣಿ ಶಾಖಾ ಮಂತ್ರಿಗಳಾದ ಶ್ರೀ ಚೆನ್ನಾರೆಡ್ಡಿಯವರ ಹಸ್ತದಿಂದಲೂ ನೆರವೇರಿ ಸದರಿ ಗ್ರಂಥವು ಸರ್ವಮಾನ್ಯವಾದುದೆಂದು ಪ್ರಶಂಸಿಸಲ್ಪಟ್ಟಿತು.

ಆದರೆ 'ಲೋಕೋ ಭಿನ್ನರುಚಿಃ' ಎಂಬ ಗಾದೆಯಂತೆ ಪೂರ್ವಪರಂಪರಾ ವಿರೋಧಿಗಳಾದ ಕೆಲವರಿಗೆ ಈ ಗ್ರಂಥವು ಮೆಚ್ಚುಗೆಯಾಗದೆ ಇರುವುದಕ್ಕೆ ವಿಷಾದಿಸಬೇಕಾಗಿದೆ. ಹೀಗೆ ಒಂದು ಗ್ರಂಥದ ಬಗೆಗೆ ಭಿನ್ನಾಭಿಪ್ರಾಯಗಳು ಏರ್ಪಡುವುದು ಹೊಸ ಮಾತೇನೂ ಅಲ್ಲ. ಉತ್ತರ ಹಿಂದೂಸ್ತಾನದವರಿಗೆ ರಾಮಾಯಣವು ಪರಮ ಪವಿತ್ರ ಗ್ರಂಥವಾಗಿ ಪೂಜೆಗೊಂಡರೆ, ಅದೇ ಗ್ರಂಥವು ಕೆಲವು ದ್ರಾವಿಡರಿಗೆ ಅಪೂಜ್ಯವೆನಿಸಿದೆ. ಇದರಿಂದ ರಾಮಾಯಣ ಗ್ರಂಥದ ಹಿರಿಮೆ ಕಡಿಮೆಯಾಗುವುದೆ? ಇಲ್ಲ, ಅದರಂತೆ ಹೆಜ್ಜೆ ಹೆಜ್ಜೆಗೆ ಆಧಾರ, ಅಧ್ಯಾಯ ಪುಟಸಂಖ್ಯೆಗಳ ಉಲ್ಲೇಖದಿಂದ ಹೊರಟಿರುವ ನಮ್ಮ "ಲೋಕಾರಾಧ್ಯ ಬಸವಣ್ಣ" ಗ್ರಂಥ ಅನೇಕರಿಗೆ ಮಾನ್ಯವಾಗಿದೆ ಎಂದರೆ ಆಶ್ಚರ್ಯಪಡಬೇಕಾದುದೇನೂ ಇಲ್ಲ.

ದಾವಣಗೆರೆ ಶ್ರೀ ಹರಳೆಣ್ಣೆ ಕೊಟ್ಟೂರು ಬಸಪ್ಪನವರು ಈ "ಲೋಕಾರಾಧ್ಯ ಬಸವಣ್ಣ" ಗ್ರಂಥದ ಬಗೆಗೆ ಕೆಲವು ಆಕ್ಷೇಪಣೆಗಳನ್ನು ಶಾಸ್ತ್ರ ಹಾಗೂ ರೂಢಿಗೆ ವಿರುದ್ಧವಾಗಿ ಪ್ರಕಟಿಸಿ ಅನೇಕ ಗುರು ಶಿಷ್ಯರ ಮನಸ್ಸಿಗೆ ನೋವನ್ನುಂಟುಮಾಡಿರುತ್ತಾರೆ. ಶಾಸ್ತ್ರಪಾಂಡಿತ್ಯರಹಿತವಾದ ಇವರ ಆಕ್ಷೇಪಣೆಗಳಿಗೆ ಉತ್ತರಿಸುವುದು ಅನಾವಶ್ಯಕವೆಂದು ನಮಗೆ ಕಂಡು ಬಂದುದರಿಂದ ನಾವು ಸುಮ್ಮನೇ ಇದ್ದೆವು. ಆದರೆ ಶ್ರೀ ಹರಳೆಣ್ಣೆಯವರು ತಾ. ೨೦–೩–೬೯ ನೇ ದಿವಸ ಶ್ರೀ ಸನ್ನಿಧಿಗೆ ಒಂದು ಪತ್ರವನ್ನು ಬರೆದು ತಮ್ಮ ಲೇಖನಕ್ಕೆ

ಶ್ರೀ ಸನ್ನಿಧಿಯ ಪ್ರತಿಕ್ರಿಯೆ ಏನೆಂದು ಕೇಳಿದುದಲ್ಲದೆ, ಅವರ ಲೇಖನವನ್ನು ಖಂಡಿಸಿ ಪ್ರಕಟವಾಗಿರುವ ಬೇರೆಯವರ ಲೇಖನಗಳ ಬಗ್ಗೆ ಸಹ ಶ್ರೀ ಸನ್ನಿಧಿಯ ಅಭಿಪ್ರಾಯವೇನೆಂದು ಕೇಳಿದ್ದಾರೆ. ಅದಕ್ಕೆ ಅವರಿಗೆ ತಾ॥ ೨೮-೩-೬೯ರಲ್ಲಿ ಒಂದು ಉತ್ತರವನ್ನು ಅಪ್ಪಣೆಕೊಡಿಸಿ ಆ ಅಪ್ಪಣೆಯಂತೆ "ಲೋಕಾರಾಧ್ಯ ಬಸವಣ್ಣ" ಗ್ರಂಥದ ಎರಡನೆಯ ಭಾಗವನ್ನು ರಚಿಸಬೇಕಾಯಿತು. ಶ್ರೀ ಹರಳೆಣ್ಣೆಯವರ ಪತ್ರ ಮತ್ತು ಅದಕ್ಕೆ ನಮ್ಮ ಉತ್ತರ ಹೀಗಿವೆ:—



॥ ಶ್ರೀ ಗುರು ಬಸವಲಿಂಗಾಯನಮಃ ॥

ಶ್ರೀಶೈಲ ಜಗದ್ಗುರು ಶ್ರೀ ಶ್ರೀ ವಾಗೀಶ ಪಂಡಿತಾರಾಧ್ಯ
ಮಹಾಸ್ವಾಮಿಗಳವರ ದಿವ್ಯಸನ್ನಿಧಾನಂಗಳಲ್ಲಿ-
ದಾವಣಗೆರೆ ಹರಳೆಣ್ಣೆ ಕೊಟ್ಟೂರು ಬಸವಪ್ಪನು ಮಾಡುವ
ಸಾಷ್ಟಾಂಗ ನಮಸ್ಕಾರಗಳು—

ಮಹಾಸ್ವಾಮಿ,

ತಮ್ಮಿಂದ ರಚಿತವಾಗಿ ಗುರುಭಕ್ತಿಚಂದ್ರ ಡಾ॥ ಎಂ. ಸಿ, ನಂಜಪ್ಪನವರಿಂದ ಪ್ರಕಾಶಿಸಲ್ಪಟ್ಟ "ಲೋಕಾರಾಧ್ಯ ಬಸವಣ್ಣ" ಎಂಬ ಕಿರುಹೊತ್ತಿಗೆಯನ್ನು ಓದಿ ನನ್ನಮೇಲೆ ಆದ ಪರಿಣಾಮದ ಬಗ್ಗೆ ಒಂದು ಲೇಖನವನ್ನು ಬರೆದು ಅಚ್ಚುಹಾಕಿಸಿ ತಮ್ಮ ಅವಗಾಹನೆಗೆ ಕಳಿಸಿಕೊಟ್ಟಿದ್ದೆ. ಅದು ತಮ್ಮ ದಿವ್ಯ ಚಿತ್ತಕ್ಕೆ ವೇದ್ಯವಾಗುವಂತೆ ಶೃತಗೊಳಿಸಲ್ಪಟ್ಟಿರಬಹುದು. ತಮ್ಮ ಪ್ರತಿಕ್ರಿಯೆ ಏನೆಂಬುದು ತಿಳಿಯಲಿಲ್ಲ. ಆದರೆ ಆ ನನ್ನ ಲೇಖನ ಧಾರವಾಡದ ಸಾವಧಾನ ಪತ್ರಿಕೆಯಲ್ಲಿ ಪ್ರಕಟಣೆಯಾದುದನ್ನು ಓದಿ ಅದರ ಖಂಡನೆ ಎಂಬುದಾಗಿ ಶ್ರೀ ಲಿಂಗಣ್ಣ ಕುಷ್ಟಗಿ ಎಂಬ ಮಹಾನುಭಾವರು ರಾಯಚೂರಿನಿಂದ ಹೊರಡುವ "ಅಮರವಾಣಿ" ಉಜ್ವಲ ಮಾಸಪತ್ರಿಕೆಯ ೧೯೬೮ ನೇ ನವೆಂಬರ್, ಡಿಶೆಂಬರ್ ಮತ್ತು ೧೯೬೯ ನೇ ಜನೆವರಿ ಫೆಬ್ರುವರಿ ಸಂಚಿಕೆಗಳಲ್ಲಿ ಲೇಖನ ಪ್ರಕಟಿಸಿರುತ್ತಾರೆ. ಅದೇರೀತಿ "ಲೋಕಾರಾಧ್ಯ ಬಸವಣ್ಣ ಗ್ರಂಥದ ಬಗ್ಗೆ ದಾವಣಗೆರೆ ಹರಳೆಣ್ಣೆ ಕೊಟ್ಟೂರು ಬಸವಪ್ಪನವರಿಗೆ ಉತ್ತರ"

ಎಂಬ ಶಿರೋನಾಮೆಯಲ್ಲಿ ಆಸ್ಥಾನ ವಿದ್ವಾನ್, ಸಾಹಿತ್ಯ ವಾರಿಧಿ ಟಿ. ಎಂ. ಬಸವರಾಜಶಾಸ್ತ್ರಿಗಳು ಎಂಬುವರು ಜನೆವರಿ ಫೆಬ್ರುವರಿ, ಮಾರ್ಚ ೧೯೬೯ ನೇ "ಸದ್ಧರ್ಮಪ್ರಭಾ" ಸಂಚಿಕೆಯಲ್ಲಿ ಒಂದು ಲೇಖನ ಪ್ರಕಟಿಸಿರುತ್ತಾರೆ. ಈ ಮಹಾನುಭಾವರುಗಳ ಆ ಲೇಖನಗಳು ತಮ್ಮ ಗಮನಕ್ಕೆ ಬಂದಿದ್ದರೆ, ಒಳ್ಳೆಯದೇ ಆಯಿತು. ಒಂದು ಪಕ್ಷ ಬಾರದಿದ್ದರೆ, ಆ ಲೇಖನಗಳನ್ನು ತರಿಸಿ ಓದುವ ಕೃಪೆಯಾಗಬೇಕು. ಮತ್ತು ಆ ಖಂಡನಾ ಲೇಖನಗಳ ಬಗ್ಗೆ ತಮ್ಮ ಅಭಿಪ್ರಾಯವನ್ನು ನನಗೆ ತಿಳಿಸುವ ಉಪಕಾರಮಾಡಬೇಕಾಗಿ ತಮ್ಮನ್ನು ಪ್ರಾರ್ಥಿಸುತ್ತೇನೆ.

ಇಂತಿ ಸಾಷ್ಟಾಂಗ ನಮಸ್ಕಾರಗಳು

ದಾವಣಗೆರೆ
೨೦—೩—೧೯೬೯

(Sd) H. ಕೊಟ್ಟೂರು ಬಸವಪ್ಪ

—•—

ಶ್ರೀಮದ್ಗಿರಿರಾಜ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೦೮
ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ
ಮಹಾಸ್ವಾಮಿಗಳವರು
ಶ್ರೀ ಜಗದ್ಗುರು ಸೂರ್ಯಸಿಂಹಾಸನಮಠ

ಶ್ರೀಶೈಲಂ
೨೮—೩—೧೯೬೯

ಶ್ರೀಮಾನ್ ಹರಳಿಹಳ್ಳಿ ಕೊಟ್ಟೂರು ಬಸವಪ್ಪನವರಿಗೆ
ಶುಭಾಶೀರ್ವಾದಗಳು

ನಿಮ್ಮ ೨೦—೩—೬೯ ರ ಪತ್ರ ತಲುಪಿ ವಿಷಯ ವೇದ್ಯವಾಯಿತು. "ಲೋಕಾರಾಧ್ಯ ಬಸವಣ್ಣ" ಗ್ರಂಥದ ಮೇಲೆ ನೀವು ಕೊಟ್ಟಿರುವ ಉತ್ತರವು ವೀರಶೈವ ಶಾಸ್ತ್ರ ವಿರುದ್ಧವೂ, ರೂಢಿ ವಿರುದ್ಧವೂ ಆಗಿರುವುದರಿಂದ ನಿಮಗೆ ಪ್ರತ್ಯೇಕವಾಗಿ ಉತ್ತರಿಸುವುದು ಅನಾವಶ್ಯಕವಾಗಿ ಕಂಡಿತು.

ಆದರೆ ನೀವು ನಿಮ್ಮ ಲೇಖಕ್ಕೆ ಪ್ರತಿಕ್ರಿಯೆಯನ್ನು ಕೇಳುತ್ತಿದ್ದೀರಿ. ಇವರಿಂದಾಗಿ ಶಾಸ್ತ್ರಾಧಾರಸಹಿತ ಇನ್ನೊಂದು ಪುಸ್ತಕವನ್ನೇ ಬರೆಯಬೇಕಾಗ ಬಹುದು. ನಿಮ್ಮ ಆಶೆಯು ಪ್ರಬಲವಾದರೆ ಆ ಗ್ರಂಥ "ಲೋಕೋದ್ಧಾರಿ ಬಸವಣ್ಣ" ಎಂಬ ಹೆಸರಿನಿಂದ ಪ್ರಕಟವಾಗುವದು.

ನಿಮ್ಮ ಲೇಖನಕ್ಕೆ ಇತರರು ಉತ್ತರ ಕೊಡುತ್ತಿರುವುದರ ಬಗೆಗೆ ನಮ್ಮ ಅಭಿಪ್ರಾಯವೇನೆಂದು ಕೇಳಿದ್ದೀರಿ. ಲೇಖನ ಸ್ವಾತಂತ್ರ್ಯದ ಈ ಜಗತ್ತಿನಲ್ಲಿ ನಮ್ಮ ಲೇಖನದಮೇಲೆ ನಿಮಗೆ ತಿಳಿದುದನ್ನು ನೀವು ಬರೆದಂತೆ ಅವರೂ ಬರೆಯುತ್ತಿರಬಹುದು. ಅದಕ್ಕೆ ಯಾರೂ ಅಡ್ಡಿಮಾಡಲು ಬರುವದಿಲ್ಲವಷ್ಟೆ? ಎಂದಿಗೂ ಸತ್ಯವು ಶಾಶ್ವತವಾಗಿ ನಿಲ್ಲುವುದು.

ಇತ್ಯಾಶಿಷಃ

ಶ್ರೀ ಹರಳೆಣ್ಣೆಯವರಿಗೆ ಅಪ್ಪಣೆಕೊಡಿಸಿದ ಪ್ರಕಾರ "ಲೋಕೋದ್ಧಾರಿ ಬಸವಣ್ಣ" ಎಂಬ ಹೆಸರಿನಿಂದ ಗ್ರಂಥವನ್ನು ಪ್ರಕಟಿಸಬೇಕಾಗಿತ್ತು. ಆದರೆ ಶ್ರೀ ಹರಳೆಣ್ಣೆಯವರಿಗೆ ಉತ್ತರರೂಪದಲ್ಲಿ ಬರೆಯಬೇಕಾದ ಗ್ರಂಥ "ಲೋಕಾರಾಧ್ಯ ಬಸವಣ್ಣ" ಭಾಗ ಎರಡು ಎಂದಿರುವದೇ ಯುಕ್ತವೆಂದು ತೋರಿದ್ದರಿಂದ ಆಪ್ರಕಾರವೇ ಗ್ರಂಥದ ಹೆಸರನ್ನು ಇರಿಸಲಾಗಿದೆ. ಆದರೆ ಅನೇಕ ಭಕ್ತ ಮಾಹೇಶ್ವರರ ಪ್ರಾರ್ಥನೆಯಂತೆ 'ಲೋಕೋದ್ಧಾರಿ ಬಸವಣ್ಣ' ಎಂಬ ಇನ್ನೊಂದು ಸ್ವತಂತ್ರ ಗ್ರಂಥವನ್ನು ಪ್ರತ್ಯೇಕವಾಗಿ ರಚಿಸಿ ಪ್ರಕಟಿಸಲಾಗುವದು.

ಸತ್ಯವನ್ನು ಪ್ರಕಟಿಸುವದೇ ನಮ್ಮ ಧ್ಯೇಯವಲ್ಲದೆ ಮಹಿಮರನ್ನು ಟೀಕಿಸುವದಲ್ಲ. ಎಂದಿಗೂ ತಂದೆಗೆ ತಂದೆಯೆಂದೂ. ಮಗನಿಗೆ ಮಗನೆಂದೂ, ಜಂಗಮರಿಗೆ ಜಂಗಮರೆಂದೂ, ಗುರುವಿಗೆ ಗುರುವೆಂದೂ, ಶಿಷ್ಯರಿಗೆ ಶಿಷ್ಯರೆಂದೂ ಸತ್ಯ ಶಾಸ್ತ್ರ ಸಿದ್ಧಾಂತವನ್ನು ನಾವು ಪ್ರಕಟಿಸಿದರೆ ಇದಕ್ಕೆ ರೇಗಿಕೊಂಡು ಶ್ರೀ ಹರಳೆಣ್ಣೆಯವರು ಜಂಗಮ, ಭಕ್ತರೆಂಬ ಭೇದವೇ ಇಲ್ಲ ಎಂಬ ದುರ್ವಾದಕ್ಕಿಳಿದಿರುವುದು ಯುಕ್ತವಲ್ಲ.

ನಾವು "ಲೋಕಾರಾಧ್ಯ ಬಸವಣ್ಣ" ಗ್ರಂಥದಲ್ಲಿ "**ಭಕ್ತ, ಮಾಹೇಶ್ವರ**" ಎಂಬ ಎರಡು "**ವಂಶಗಳು**" ಅನಾದಿಕಾಲದಿಂದ ಬಂದವುಗಳೆಂದು ಗ್ರಂಥಾ

ಧಾರದಿಂದ ಸ್ಪಷ್ಟಪಡಿಸಿದ್ದೇವೆ. ಅವು ಶಾಸ್ತ್ರಾಧಾರಸಮ್ಮತವಾದವುಗಳೇ ಹೊರತು ನಮ್ಮ ಕಲ್ಪನೆಗಳೇನೂ ಅಲ್ಲ. ಧರ್ಮಸಂಬಂಧದ ಯಾವ ನಿರ್ಣಯಕ್ಕೂ ಶಾಸ್ತ್ರಾಧಾರಗಳನ್ನು ಅವಲಂಬಿಸಬೇಕೇ ವಿನಾ ಆ ವಿಚಾರದಲ್ಲಿ ಸ್ವಕಪೋಲ ಕಲ್ಪನೆಯ ಯುಕ್ತಿಗಳಿಂದ ಯಾವ ಪ್ರಯೋಜನವೂ ಆಗುವದಿಲ್ಲ.

ಶ್ರೀಕೃಷ್ಣನಂತಹ ದಿವ್ಯಜ್ಞಾನಿಯೂ ಸಹ ಈ ವಿಚಾರವಾಗಿ ಗೀತೆಯಲ್ಲಿ

"ಯಃ ಶಾಸ್ತ್ರವಿಧಿಮುತ್ಸೃಜ್ಯ ವರ್ತತೇ ಕಾಮಕಾರತಃ।
ನ ಸ ಸಿದ್ಧಿಮವಾಪ್ನೋತಿ ನ ಸುಖಂ ನ ಪರಾಂ ಗತಿಂ ॥೨೩॥
ತಸ್ಮಾಚ್ಛಾಸ್ತ್ರಂ ಪ್ರಮಾಣಂತೇ ಕಾರ್ಯಾಕಾರ್ಯವ್ಯವಸ್ಥಿತೌ।
ಜ್ಞಾತ್ವಾ ಶಾಸ್ತ್ರವಿಧಾನೋಕ್ತಂ ಕರ್ಮಕರ್ತುಮಿಹಾರ್ಹಸಿ ॥೨೪॥

(ಭ. ಗೀ. ಅ. ೧೬)

"ಯಾವನೊಬ್ಬನು ಸ್ವೇಚ್ಛೆಯಾಗಿ ಮನಸ್ಸಿಗೆ ಬಂದಂತೆ ವರ್ತಿಸಿ ಶಾಸ್ತ್ರ ಮಾರ್ಗಗಳನ್ನು ಉಲ್ಲಂಘಿಸುವನೋ ಅವನು ಸಂಸಾರದಲ್ಲಿ ಯಾವ ಸಿದ್ಧಿಯನ್ನೂ ಸಂಪಾದಿಸಲಾರ, ಸುಖವನ್ನೂ ಹೊಂದಲಾರ, ಕೊನೆಗೆ ಮೋಕ್ಷವನ್ನೂ ಪಡೆಯಲಾರ. ಆದುದರಿಂದ ಎಲೋ ಅರ್ಜುನಾ! ನಿನಗೆ ಯಾವುದನ್ನು ಮಾಡಬೇಕು, ಯಾವುದನ್ನು ಬಿಡಬೇಕು ಎಂಬ ವ್ಯವಸ್ಥೆಗೆ ಶಾಸ್ತ್ರವೇ ಪ್ರಮಾಣವಾದುದು ಎಂದು ಸ್ಪಷ್ಟಪಡಿಸಿದ್ದಾನೆ.

ಇದರಿಂದಾಗಿ ಶಾಸ್ತ್ರ ನಿರ್ಣಯವೇ ಕೊನೆಯದಾದುದರಿಂದ ಆ ಮಾರ್ಗವನ್ನೇ ನಾವು ಅನುಸರಿಸಿದ್ದೇವೆ. ಶ್ರೀ ಹರಳಿಣ್ಣಿಯವರೂ ಇದೇ ಮಾರ್ಗವನ್ನು ಅನುಸರಿಸಿದರೆ ಅವರಿಗೂ ಭೂಷಣವಾಗುವದು.

ಶ್ರೀ ಹರಳಿಣ್ಣಿಯವರಿಗೆ ಯಾರೋ ಇತಿಹಾಸದ ಹುಚ್ಚನ್ನು ಹಿಡಿಸಿದ್ದಾರೆ. ಕೈಲಾಸಪತಿ ಶಿವನನ್ನು ಶೈವ-ಮತಕ್ಕೂ. ವೀರಶೈವ-ಮತಕ್ಕೂ ಮೂಲಾಧಾರನನ್ನಾಗಿ ಎಲ್ಲರೂ ಸ್ತೋತ್ರಮಾಡುತ್ತಾರೆ. ಆದರೆ ಈ ಶಿವನು ಐತಿಹಾಸಿಕ ವ್ಯಕ್ತಿಯಲ್ಲ, ಎಂದಾಕ್ಷಣ ಶಿವಪೂಜೆ ಮಾಡುವುದನ್ನೇ ಬಿಡಬೇಕೆ ? ಇವರು ತಿಳಿದಿರುವಂತೆ ಇತಿಹಾಸ ಕ್ರಿಸ್ತಶಕೆಯ ಪ್ರಾರಂಭವಲ್ಲ. ಅದಕ್ಕೆ ಸ್ವಲ್ಪ ಪೂರ್ವವಲ್ಲ, ಅಥವಾ ತಾಮ್ರಪಟ ಶಿಲಾಲೇಖಗಳು ಮಾತ್ರ ಇತಿಹಾಸವಲ್ಲ. ಇತಿಹಾಸದ ನಿಜವಾದ ಅರ್ಥ ಶಾಸ್ತ್ರಸಿದ್ಧಾಂತ ಪ್ರಕಾರ "ಇತಿಹಾಸಃ

ಪುರಾವೃತ್ತಃ" "ಇತಿಹಾಸವೆಂದರೆ ಹಳೆಯ ವೃತ್ತಾಂತ" ಎಂದು ಮಾತ್ರ ಅರ್ಥವಾಗುತ್ತದೆ. ಇದರಿಂದಾಗಿ ಪುರಾಣಗಳಲ್ಲಿಯೂ, ಕಥೆಗಳಲ್ಲಿಯೂ ಬಂದಿರುವ ವ್ಯಕ್ತಿಚರಿತ್ರೆಗಳು ಇತಿಹಾಸಗಳಾಗಿಯೇ ಪರಿಣಮಿಸಲ್ಪಡುವವು.

ಇನ್ನು ಪುರಾಣದ ವಿಚಾರವಾಗಿ ಅಮರ ಕವಿಯು ಹೀಗೆ ಸ್ಪಷ್ಟೀಕರಣ ಮಾಡಿದ್ದಾನೆ. "ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ ವಂಶಾನುಚರಿತಂ ಚೇತಿ ಪುರಾಣಂ ಪಂಚ ಲಕ್ಷಣಂ॥

ಎಂದರೆ "ಪುರಾಣದಲ್ಲಿ ವ್ಯಕ್ತಿಯ ವಂಶ, ಕಾಲ ಮತ್ತು ಆತನ ವಂಶದ ಪೂರ್ವಿಕರ ಚರಿತ್ರೆ ಇವೆಲ್ಲವೂ ತುಂಬಿರುತ್ತವೆ. ಈ ಲಕ್ಷಣವುಳ್ಳ ಕೃತಿಯೇ ಪುರಾಣವೆಂದು ಹೇಳಿಸಿಕೊಳ್ಳುತ್ತದೆ." ಹೀಗೆ ಹಸುಮಕ್ಕಳಿಗೂ ತಿಳಿಯುವಂತೆ ಅಮರಕವಿಯು ಪುರಾಣದ ಲಕ್ಷಣಗಳನ್ನು ಸ್ಪಷ್ಟಪಡಿಸಿದ್ದಾನೆ. ಇದರಿಂದಾಗಿ ಪುರಾಣಗಳಲ್ಲಿ ಐತಿಹಾಸಿಕ ಚರಿತ್ರೆಗಳು ಇರುತ್ತವೆಂಬುದು ನಿರ್ವಿವಾದ ಸಿದ್ಧವಾಯಿತು. ಆದುದರಿಂದ ಪುರಾಣದ ವಿಚಾರಗಳು ಸತ್ಯದೂರ ಎಂಬ ಶ್ರೀ ಪರಳೆಣ್ಣೆಯವರ ದುರ್ವಾದವು ಆರಂಭದಲ್ಲಿಯೇ ಸತ್ತುಹೋದಂತಾಯಿತು. ಪ್ರಾಚೀನ ಗ್ರಂಥಗಳ ಅಭ್ಯಾಸ ಇಲ್ಲದುದರಿಂದ ಇವರು ಇಂತಹ ದುರ್ವಾದಕ್ಕೆ ಇಳಿದಿದ್ದಾರೆಂದು ಎಲ್ಲರಿಗೂ ಸ್ಪಷ್ಟವಾಗಿ ಗೊತ್ತಾಗುತ್ತದೆ.

ಇನ್ನೂ ಕೆಲವರು ವೀರಶೈವ ಸಮಾಜದಲ್ಲಿ ಗುರು-ವಿರಕ್ತರ ಪಕ್ಷಗಳು ಶಾಶ್ವತವಾಗಿ ಉಳಿದರೆ ತಾವು ಹೊಟ್ಟೆ ಹೊರೆದುಕೊಳ್ಳಲು ಅನುಕೂಲವಾಗುವುದೆಂಬ ಇಚ್ಛೆಯಿಂದ "ಲೋಕಾರಾಧ್ಯ ಬಸವಣ್ಣ" ಗ್ರಂಥವನ್ನು ಮಾನ್ಯ ಮಾಡುವುದಕ್ಕೆ ಬದಲು ಬಸವಣ್ಣನವರಿಗೆ "ಲೋಕಾರಾಧ್ಯ" ಎಂಬ ವಿಶೇಷಣವನ್ನು ಉಪಯೋಗಿಸಿದ್ದು ಮಹಾ ಪ್ರಮಾದವೆಂದು ಮುಂತಾಗಿ ಆಕ್ಷೇಪಿಸಿ ಬರೆದುಕೊಳ್ಳುತ್ತಿದ್ದಾರೆ. ಲೋಕಾರಾಧ್ಯ ಎಂದರೆ ಜಗನ್ಮಾನ್ಯ, ಜಗತ್ಪೂಜ್ಯ ಎಂಬ ಅರ್ಥದಲ್ಲಿ ಉಪಯೋಗಿಸಲ್ಪಟ್ಟಿದೆಯೇ ವಿನಾ ಬಸವಣ್ಣನವರು ಲೋಕಕ್ಕೆ ಗುರು ಎಂಬ ಅರ್ಥದಲ್ಲಿ ಅಲ್ಲ. ಬಸವಣ್ಣನವರಿಗೆ ಯಾರು ಯಾವ ದೊಡ್ಡ ವಿಶೇಷಣವನ್ನು ಕೊಟ್ಟರೂ ಅದನ್ನು ಅವರು ಎಂದೋ ತಿರಸ್ಕರಿಸಿ "ಎನಗಿಂತ ಕಿರಿಯರಿಲ್ಲ" ಎಂದು ನಿಷ್ಠುರವಾಗಿ ತಮ್ಮನ್ನು ಸ್ತುತಿಸುವವ

ರನ್ನು ಖಂಡಿಸಿದ್ದಾರೆ. ಇಂತಹ ಉದಾರ ವ್ಯಕ್ತಿತ್ವವನ್ನು ಕಂಡು ಅವರನ್ನು "ಲೋಕಾರಾಧ್ಯ" ಎಂದು ನಾವು ಕರೆದುದರಲ್ಲಿ ತಪ್ಪೇನೂ ಇಲ್ಲವೆಂದು ಇಲ್ಲಿ ಸ್ಪಷ್ಟಪಡಿಸಿದ್ದೇವೆ. ವೀರಶೈವ ಸಮಾಜದ ಐಕ್ಯತೆಗೆ ಧಕ್ಕೆತರುವ ಘಾತುಕ ವ್ಯಕ್ತಿಗಳು ಇನ್ನಾದರೂ ತಮ್ಮ ದುರ್ಬುದ್ಧಿಯನ್ನು ಬಿಟ್ಟು ಸನ್ಮಾರ್ಗಕ್ಕೆ ಬರಲೆಂದು ನಾವು ಹಾರೈಸುತ್ತೇವೆ.

ಗ್ರಂಥಕರ್ತರು.



॥ ಶ್ರೀ ಮಲ್ಲಿಕಾರ್ಜುನ ಪ್ರಸೀದ ॥

# ಪ್ರಕಾಶಕರ ನಾಲ್ಕು ಮಾತುಗಳು.

ಶ್ರೀಶೈಲಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರು ಬಸವಚರಿತ್ರೆಯ ಆಳವಾದ ಅಭ್ಯಾಸದಿಂದ "ಲೋಕಾರಾಧ್ಯ ಬಸವಣ್ಣ" ಎಂಬ ಗ್ರಂಥವನ್ನು ರಚಿಸಿ ಬಸವಣ್ಣನವರ ಬಗೆಗೆ ಎಂದೂ ಯಾರೂ ತಿಳಿಯಲಾರದ, ತಿಳಿದಿದ್ದರೂ ಪಾಕ್ಷಿಕ ಮನೋಭಾವದಿಂದ ಮುಚ್ಚಿಟ್ಟಿದ್ದ ಹೊಸ ವಿಷಯಗಳನ್ನು ಹೊರಗೆಡಹಿ ಸಮಾಜಕ್ಕೂ ಸಾಹಿತ್ಯಕ್ಕೂ ಬಹಳ ಉಪಕಾರ ಮಾಡಿದ್ದಾರೆಂಬ ಮಾತು ನನ್ನ ಮೊದಲನೆಯ ಮುನ್ನುಡಿಯಲ್ಲಿಯೇ ವಿಶಾಲವಾಗಿ ಬಂದಿದೆ.

ಆ ನನ್ನ ಮುನ್ನುಡಿಯಮೇಲೆ ನನ್ನ ಸ್ನೇಹಿತರಾದ ದಾವಣಗೆರೆಯ ಶ್ರೀ ಹರಳೆಣ್ಣೆ ಕೊಟ್ರೂರು ಬಸವಪ್ಪನವರು ಶ್ರೀ ಜಗದ್ಗುರುಗಳವರಿಗೆ ಬಸವ ಭಕ್ತರು ಶ್ರೇಯಸ್ಸು ಸಲ್ಲಿಸಬೇಕಾಗಿದ್ದರೆ 'ಮದರ ಇಂಡಿಯಾ' ಗ್ರಂಥಬರೆದ ಅಮೆರಿಕಾ ಮಹಿಳೆ 'ಮಿಸ್ ಮೆಯೊ' ಅವರಿಗೆ ಭರತಖಂಡದಲ್ಲಿ ಅವರ ಗ್ರಂಥಕ್ಕೆ ಸಲ್ಲಿದಂತಹ ಶ್ರೇಯಸ್ಸು ಸಲ್ಲಬೇಕೆಂದು ಬರೆದು ಶ್ರೀ ಜಗದ್ಗುರುಗಳವರನ್ನು ಉದ್ದೇಶಿಸಿ "ಗ್ರಂಥಕರ್ತರು ವೀರಶೈವರಿದ್ದರೆ....ಉಳ್ಳಾಪಳ್ಳಿ, ಹೇಯವಾದ ಕೆಲಸ, ಪೂರ್ವಗ್ರಹಪೀಡಿತರು, ಮೋಸ ಮತ್ತು ದ್ರೋಹ ಮಾಡುವ ಹಂಚಿಕೆ "ಇತ್ಯಾದಿಯಾಗಿ ಅತ್ಯಂತ ಹೀನಾಯವಾದ ಶಬ್ದಗಳಿಂದ ಟೀಕಿಸಿದ್ದಾರೆ. ಇದು ಇವರು ಮಾಡಿರುವ ಅಕ್ಷಮ್ಯ ಅಪರಾಧ. ವಿಮರ್ಶೆಮಾಡುವ ನೆಪದಲ್ಲಿ ಮೇಲಿನಂತೆ ಮನಬಂದಹಾಗೆ ಟೀಕಿಸಿರುವದು ಅವರಿಗೇ ಲಾಂಛನಾಸ್ಪದ. ಇದು ವಿಮರ್ಶಕರ ಸತ್ಸಂಪ್ರದಾಯವಲ್ಲ.

ಆದರೆ ನಿಜವಾದ ಬಸವ ಭಕ್ತರು ಶ್ರೀಶೈಲಜಗದ್ಗುರು ಮಹಾಸ್ವಾಮಿಗಳವರನ್ನು ಎಂದಿನಿಂದಲೂ ಮನಃಪೂರ್ವಕವಾಗಿ ಕೊಂಡಾಡುತ್ತಲೇ ಇದ್ದಾರೆ.

ಶ್ರೀ ಹರಳೆಣ್ಣೆಯವರು ಒಂದುರೀತಿಯಲ್ಲಿ ಉಪಕಾರವನ್ನೇ ಮಾಡಿದ್ದಾರೆನ್ನಬೇಕಾಗುತ್ತದೆ. ಏತಕ್ಕೆಂದರೆ ವಿದ್ಯಾವಾರಿಧಿಗಳಾದ ಶ್ರೀ ಜಗದ್ಗುರು ಮಹಾಸ್ವಾಮಿಗಳವರನ್ನು ಯಾವುದೇಒಂದು ವಿಧದಿಂದ ಕೆಣಕಿ ಅವರ ವಿದ್ಯಾ ಭಾಂಡಾರದಿಂದ ಇನ್ನೂ ಅನೇಕ ಸತ್ಯ - ಸಾಹಿತ್ಯ - ಶಾಸ್ತ್ರ - ಸಿದ್ಧಾಂತಗಳು ಹೊರಗೆಬರುವಂತೆ ಮಾಡಿದ್ದಾರೆ.

ಸದ್ಯಃ ಪ್ರಕಾಶಗೊಂಡ "ಲೋಕಾರಾಧ್ಯ ಬಸವಣ್ಣ" ಗ್ರಂಥದ ಎರಡನೆಯ ಭಾಗವು ಅತ್ಯುತ್ತಮ ಶ್ರೇಣಿಯ ಶಾಸನ ಗ್ರಂಥವಾಗಿದೆಯೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಶ್ರೀ ಹರಳೆಣ್ಣೆಯವರ ಲೇಖನಕ್ಕೆ ಈಗಾಗಲೇ ಹತ್ತೆಂಟು ಜನ ಪಂಡಿತರು ಬೇರೆಬೇರೆ ಪತ್ರಿಕೆಗಳಲ್ಲಿ ಸಾಕಾದಷ್ಟು ಖಂಡನಾತ್ಮಕವಾದ ಉತ್ತರ ಕೊಟ್ಟಿರುತ್ತಾರೆ. ಆದರೆ ಶ್ರೀ ಹರಳೆಣ್ಣೆಯವರಿಗೆ ಅವುಗಳಿಂದ ಸಮಾಧಾನವಾಗದೇ ಶ್ರೀ ಜಗದ್ಗುರುಗಳವರಿಗೆ ಪತ್ರಬರೆದು ತಮ್ಮ ಟೀಕೆಗಳಿಗೆ ಶ್ರೀ ಜಗದ್ಗುರುಗಳವರ ಪ್ರತಿಕ್ರಿಯೆ ಏನೆಂದು ಕೇಳಿಕೊಳ್ಳುವ ಸಾಹಸ ಮಾಡಿದ್ದಾರೆಂಬುದು ಈ ಗ್ರಂಥದಲ್ಲಿ ಇನ್ನೊಂದುಕಡೆ ಪ್ರಕಟವಾಗಿರುವ ಅವರ ಪತ್ರದಿಂದ ಗೊತ್ತಾಗುತ್ತದೆ. ಶ್ರೀ ಜಗದ್ಗುರು ಮಹಾಸ್ವಾಮಿಗಳವರಿಗೆ ಇಂತಹ ಕುತ್ಸಿತ ಟೀಕೆಗಳ ಕಡೆಗೆ ಗಮನವಿರುವದಿಲ್ಲ. ಧರ್ಮಪ್ರಸಾರ, ಸದ್ಬೋಧೆ, ಶಿಷ್ಯೋದ್ಧಾರಗಳ ಕಡೆಗೇ ಅವರು ಹೆಚ್ಚು ಗಮನ ಕೊಡುತ್ತಿದ್ದಾರೆ. ಇದೇ ಧರ್ಮಾಚಾರ್ಯರ ಕರ್ತವ್ಯವಾಗಿದೆ.

"ಲೋಕಾರಾಧ್ಯ ಬಸವಣ್ಣ" ಗ್ರಂಥದ ಎರಡನೆಯ ಭಾಗವು ಶೀಘ್ರವಾಗಿ ಪ್ರಕಟವಾಗಿ ಜನತೆಗೆ ಇನ್ನೂ ಅನೇಕ ಸತ್ಯವಿಷಯಗಳು ದೊರೆಯಲು ಕಾರಣೀಭೂತರಾದುದಕ್ಕೆ ಶ್ರೀ ಹರಳೆಣ್ಣೆಯವರಿಗೆ ನಾನು ನನ್ನ ಹಾರ್ದಿಕ ಧನ್ಯವಾದಗಳನ್ನು ಸಲ್ಲಿಸುತ್ತೇನೆ.

ಮತ್ತು ಶ್ರೀ ಹರಳೆಣ್ಣೆಯವರ ಟೀಕೆಗಳಿಗೆ ಉತ್ತರರೂಪವಾಗಿ ಈ "ಲೋಕಾರಾಧ್ಯ ಬಸವಣ್ಣ" ಎರಡನೇ ಭಾಗವನ್ನು ರಚಿಸಿ, ವೀರಶೈವ ಮತವು ಬಸವೇಶ್ವರನಿಗಿಂತ ಹಿಂದೆಯೇ ಪ್ರಸಿದ್ಧವಾಗಿತ್ತೆಂಬ ಹಾಗು ವೀರಶೈವ ಮತವನ್ನು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರೇ ಸ್ಥಾಪಿಸಿದರೆಂಬ ಅಂಶವನ್ನು ಸ್ಥಿರಗೊಳಿಸಿ, ಭಕ್ತಿಭಾಂಡಾರಿ ಬಸವಣ್ಣನವರ ನಿಜಚರಿತ್ರೆಯನ್ನು ಪ್ರಕಟಗೊಳಿಸಿದುದಕ್ಕಾಗಿ ಶ್ರೀಶೈಲಜಗದ್ಗುರು ಮಹಾಸನ್ನಿಧಿಯವರಿಗೆ ಭಕ್ತಿಯಿಂದ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ಸಮರ್ಪಿಸುತ್ತೇನೆ.

— ಪ್ರಕಾಶಕರು.



# ಅನುಕ್ರಮಣಿಕೆ


| | | ಪುಟ |
|---|---|---|
| ೧ | ಪುರಾಣಗಳು ಸಬಲಾಧಾರಗಳು | ೧ |
| ೨ | ಶ್ರೀ ರೇವಣಸಿದ್ಧಾದಿಪಂಚಾಚಾರ್ಯರೇ ವೀರಶೈವ ಮತಸ್ಥಾಪಕರು | ೮ |
| ೩ | ಬಸವಣ್ಣನವರ ಕಾಲಕ್ಕೆ ಶ್ರೀ ಜಗದ್ಗುರು ಪಂಚಾಚಾರ್ಯರ ಪರಂಪರೆ ಉಚ್ಛ್ರಾಯ ಸ್ಥಿತಿಯಲ್ಲಿತ್ತು | ೯ |
| ೪ | ಬಸವಣ್ಣನವರು ಶ್ರೀ ಜಗದ್ಗುರು ಪಂಚಾಚಾರ್ಯರ ಪರಂಪರೆಯ ಜಾತವೇದಿ ಮುನಿಗಳಿಂದಲೇ ಶಿವದೀಕ್ಷಾ ಸಂಪನ್ನರಾದರು | ೧೯ |
| ೫ | ಭಕ್ತ ಮಾಹೇಶ್ವರರ ವಂಶಗಳು ಅನಾದಿಯಿಂದ ಬಂದವುಗಳು | ೨೧ |
| ೬ | ಬಸವಣ್ಣನವರ ವಚನಗಳ ಸತ್ಯಾರ್ಥ | ೩೫ |
| ೭ | ಸತ್ಯನಾಥನ ಕಥೆಯಲ್ಲಿ ಇತಿಹಾಸವಿದೆ | ೪೧ |
| ೮ | ವೀರಶೈವ ಅನಾದಿಭಕ್ತರು | ೪೪ |
| ೯ | ಹರಳಯ್ಯ ಮಧುವಯ್ಯಗಳ ವಿಚಾರ | ೪೭ |
| ೧೦ | ವಚನಗಳಲ್ಲಿಯೂ ಜ್ಞಾನಕ್ರಿಯಾಮಾರ್ಗಗಳಿವೆ | ೫೦ |
| ೧೧ | ಚನ್ನಬಸವಣ್ಣ ಮತ್ತು ಅಕ್ಕನಾಗಮ್ಮ | ೫೩ |
| ೧೨ | ಶೂನ್ಯ ಸಿಂಹಾಸನ | ೫೪ |
| ೧೩ | ಪಂಡಿತೋತ್ತಮರ ಮತ್ತು ಸಮಾಜದ ಗಣ್ಯ ವ್ಯಕ್ತಿಗಳ ಅಭಿಪ್ರಾಯ | ೫೬ |

# ಪುರಾಣಗಳು ಸಬಲಾಧಾರಗಳು



**ಸತ್ಯವೇ ಶಿವ! ಶಿವನೇ ಸತ್ಯ!!** ಎಂಬುದನ್ನು ಪ್ರಮಾಣವಾಗಿಟ್ಟು ಕೊಂಡು ಎಲ್ಲರೂ ಸಾಹಿತ್ಯವನ್ನು ರಚಿಸಿದರೆ ಜನರಿಗೆ ಮಹೋಪಕಾರ ವಾದೀತು. ಆದರೆ ಮೇಲಿನ ಮಾತನ್ನು ಪರೋಪದೇಶಕ್ಕೆ ಮಾತ್ರ ಉಪಯೋ ಗಿಸಿಕೊಂಡರೆ ಅಂತಹ ಅನ್ಯಾಯ ಮತ್ತೊಂದಿಲ್ಲ.

ಅಚ್ಚ ಹೊಸತಾದ ವಿಷಯಗಳು ಹೊರಬಿದ್ದಾಗ ಆ ಗ್ರಂಥದ ಬಗೆಗೆ ಆಕ್ಷೇಪಗಳು ಬರುವುದು ಸ್ವಾಭಾವಿಕ. ಆದಕ್ಕಾಗಿಯೇ ಬಸವಣ್ಣನವರ ಬಗೆಗೆ ನಮ್ಮ ಮೊದಲನೆಯ ಕೃತಿಯಾದ "**ಲೋಕಾರಾಧ್ಯ ಬಸವಣ್ಣ**" ಗ್ರಂಥ ದಲ್ಲಿ ಹೆಜ್ಜೆ-ಹೆಜ್ಜೆಗೆ ಗ್ರಂಥಪ್ರಮಾಣಗಳನ್ನು ಕೊಡುತ್ತಲೇ ಹೋಗಿದ್ದೇವೆ. ಆ ಗ್ರಂಥಗಳನ್ನು ತರಿಸಿಕೊಂಡು ಆಯಾ ಆಧಾರಗಳನ್ನು ಸರಿಯಾಗಿ ಓದಿ ಕೊಂಡಿದ್ದರೆ ಆಕ್ಷೇಪಗಳು ಹುಟ್ಟಲು ಕಾರಣಗಳೇ ಇರಲಿಲ್ಲ. ಸಾಹಿತಿಗಳು ಸ್ವಲ್ಪ ಶ್ರಮವಹಿಸಿ ಸಂಶೋಧನೆ ನಡೆಯಿಸಿದರೆ "**ಲೋಕಾರಾಧ್ಯ ಬಸವಣ್ಣ**" ಗ್ರಂಥದ ಸತ್ಯತೆಯು ತ್ರಿಕಾಲಾಬಾಧಿತವಾಗಿ ನಿಲ್ಲುತ್ತದೆ. ಎತ್ತು ತ್ತಲೇ ವಾಸ್ತವಿಕ ದೃಷ್ಟಿಕೋನವನ್ನು ಬದಲು ಮಾಡಿ ಮೂಲ ಗ್ರಂಥಗಳನ್ನು ಟೀಕಿಸಿ ವೇದ ಸತ್ಯವಲ್ಲ, ಆಗಮ ಸತ್ಯವಲ್ಲ. ಪುರಾಣ ಸತ್ಯವಲ್ಲ ಎಂದರೆ ಜಗತ್ತಿನಲ್ಲಿ ಸತ್ಯವಾದುದು ಯಾವುದೂ ಉಳಿಯುವುದಿಲ್ಲ.

ಇಂತಹ ದುರ್ವಾದವನ್ನಾದರೂ ಕೊನೆಯವರೆಗೆ ಸಾಧಿಸಿದ್ದರೆ ಒಂದು ರೀತಿಯಾಗಿ ಸಮಾಧಾನಪಟ್ಟುಕೊಳ್ಳಬಹುದಾಗಿತ್ತು. ಆದರೆ ದಾವಣಗೆರೆ ಶ್ರೀ ಹರಳೆಣ್ಣೆಯವರು ತಮಗೆ ಅನುಕೂಲವಾದ ಪುರಾಣಾಧಾರಗಳನ್ನು ಮಾನ್ಯ ಮಾಡಿ, ತಮ್ಮ ದುರ್ವಾದಕ್ಕೆ ಅನಾನುಕೂಲವಾಗುವಂತಹ ಪುರಾಣಾಧಾರಗ ಳನ್ನು ಒಪ್ಪದೇ ಇರುವುದು ಇವರ ಅನುಕೂಲಸಿಂಧು ಮಾರ್ಗಕ್ಕೆ ನಿದರ್ಶನ ವಾಗಿದೆ.

ಶ್ರೀ ಹರಳೆಣ್ಣೆಯವರು ತಾವು ಒಳ್ಳೇ ಶುದ್ಧಾತ್ಮರೆಂಬಂತೆ ನಮ್ಮನ್ನು ಕುರಿತು "ಬಸವಣ್ಣನವರನ್ನು ತೆಗಳಿದ್ದಾಯಿತು, ಈಗ ಅವರನ್ನು ಹೊಗಳುವ

ಮುಖವಾಡ ಉದ್ದೇಶ ಮಾತ್ರ ಒಂದೇ" ಎಂದು ಪೂರ್ವಾಪರ ವಿವೇಚಿಸದೆ ಆರಂಭದಲ್ಲಿಯೆ ಆಕ್ಷೇಪಿಸಿದ್ದಾರೆ, ಇದು ಇವರ ಸ್ವಭಾವವೆಂದು ತೋರುತ್ತದೆ. ಇದನ್ನು ಇವರು ಸಾಧಾರಣವಾಗಿ ಸಿದ್ಧಮಾಡಿ ತೋರಿಸಲಿ?

ಶ್ರೀಯುತರು "ಪುರಾಣದಲ್ಲಿ ಸತ್ಯಶೋಧನೆಯಿಲ್ಲ, ಪುರಾಣ ಕಾವ್ಯಗಳನ್ನು ಆಧರಿಸಿ ಬರೆದಿರುವ ವಿಷಯಗಳೆಲ್ಲ ಸತ್ಯಕ್ಕೆ ದೂರವಾಗಿವೆ" ಎಂದು ಹೇಳಿದ್ದಾರೆ. ಆದರೆ ಈ ಪುರಾಣಗಳ ಬಗೆಗೆ ಹಳೆಯ ಸಾಹಿತಿಗಳು ಏನು ಹೇಳಿದ್ದಾರೆಂಬುದನ್ನು ಇವರು ಕಣ್ಣುತೆರೆದು ನೋಡಬೇಕು,

ಬಸವ ಪುರಾಣದ ಬಗೆಗೆ ಭೀಮಕವಿಯು **"ಬಸವನ ಚರಿತೆ, ಸತ್ಯಾರ್ಥ, ಆದಿಗಣ ಚರಿತೆ, ವೇದ ಪುರಾಣ ಸಮ್ಮತ,"** ಮುಂತಾದ ವಾಕ್ಯಗಳಿಂದ ಇದು ಕೇವಲ ಕಲ್ಪಿತ ಕಥೆಯಲ್ಲವೆನ್ನುವುದನ್ನು ಈ ಕೆಳಗಿನಂತೆ ಸ್ಪಷ್ಟಪಡಿಸಿದ್ದಾನೆ

"ಆದಿಲಿಂಗ ರಹಸ್ಯ ಸಿದ್ಧಾಂತಾದಿ ವೇದ ಪುರಾಣ ಸಮ್ಮತ।
ವಾದ ಬಸವಪುರಾತನರ ಸತ್ಯಾರ್ಥ ಮಾತ್ರಕದಿಂ ॥
ಕೋದ ಮಣಿಗಳ ಸೂತ್ರದಂತಿರೆ ಆದಿಗಣಚರಿತಂಗಳೊಳು ಸಂ ।
ವೇದಿಸಲು **ಬಸವನ ಚರಿತೆಯಂ** ಬಣ್ಣಿಸುವೆನೊಸೆದು॥ ॥೨೩॥

ಇದೇ ಪ್ರಕಾರ:—

"ಶಿವಕವಿಗಳೆನಿಸಿದ ಪುರಾತನ ಕವಿಗಳಂ ಶಿವಶಕ್ತಿನೂತನ।
ಕವಿಗಳಂ ಶಿವಧರ್ಮಶಾಸ್ತ್ರಕಳಾವಿಶಾರದರಂ।
ಶಿವರಹಸ್ಯ ಮಹತ್ವ ಶಿವತತ್ವವಿದರಂ ಸಕಳಾಗಮಜ್ಞ ಪ್ರವರರೆಂ।
ಭಾವಿಸಿ ರಚಿಸುವೆಂ **ಬಸವ ಚರಿತೆಯನು**॥ ॥೧೨॥

ಹೀಗೆ ಭೀಮಕವಿಯು **ಬಸವನ ಚರಿತೆ** ಎಂದು ಪೇಳ್ಕೊಂಡ ಪದ್ಯಗಳಲ್ಲಿ ಸ್ಪಷ್ಟ ಪಡಿಸಿರುವಂತೆ ಸಿಂಗಿರಾಜ ನೂತನಕಾವ್ಯದ ಬಗೆಗೆ ಪ್ರತಿಸಂಧಿಯ ಕೊನೆಯಲ್ಲಿ "ಅಮಲಬಸವರಾಜ ಚಾರಿತ್ರದೊಳು" ಎಂದು ವ್ಯಕ್ತ ಗೊಳಿಸಿರುವುದರಿಂದ ಇವು ಚರಿತ್ರೆಗಳಾದವೇ ವಿನಃ ಶ್ರೀ ಹಲಗೆಣ್ಣೆಯವರು ಅಂದುಕೊಂಡಂತೆ ಕಂತೆಪುರಾಣಗಳಾಗಲಿಲ್ಲ, ಭೀಮಕವಿಯು ಬಸವ ಪುರಾಣದ ಈ ಎರಡು

ಪದ್ಯಗಳನ್ನಾದರೂ ಶ್ರೀ ಹಳಕಟ್ಟಿಯವರು ನೋಡಿದ್ದರೆ, ಅವರು ಪುರಾಣಗಳು ಕಟ್ಟುಕಥೆಗಳೆಂದು ಭಾವಿಸುತ್ತಲೇ ಇರಲಿಲ್ಲ. ಆದರೆ ಅವರ ಉದ್ದೇಶ ಬೇರೆಯೇ ಇರಬೇಕೆಂದು ನಾವು ಭಾವಿಸುತ್ತೇವೆ. ಲೋಕಾರಾಧ್ಯ ಬಸವಣ್ಣ ಗ್ರಂಥದಲ್ಲಿ ಬಂದಿರುವ ಹೊಸಹೊಸ ವಿಚಾರಗಳನ್ನು ಕಂಡ ಶ್ರೀಯುತರು ದಿಗಿಲುಗೊಂಡು "ಮೂಲೇ ಕುಠಾರಾಘಾತಃ" ಎಂಬ ಗಾದೆಯಂತೆ ಗಿಡದ ಬುಡವನ್ನೇ ಕತ್ತರಿಸಿದರೆ ಟೊಂಗೆ ಚುಂಗುಗಳೆಲ್ಲ ತಾವೇ ನಾಶವಾಗುತ್ತವೆಂದು ಯೋಚಿಸಿ, ಒಟ್ಟಾಗಿ ಪುರಾಣಗಳೇ ನಿರಾಧಾರಗಳೆಂದು ಹೇಳುವ ಸಾಹಸ ಮಾಡಿದ್ದಾರೆ.

"ಬಸವರಾಜದೇವರರಗಳೆ" ಯನ್ನು ಪ್ರಕಾಶಪಡಿಸಿರುವ ಶ್ರೀ ಮಾನ್ ಟಿ. ಎಸ್. ವೆಂಕಣ್ಣಯ್ಯನವರು ಬಸವಣ್ಣನವರ ಚರಿತ್ರೆಯನ್ನು ಕಟ್ಟಬೇಕಾಗಿರುವ ಸಾಮಗ್ರಿಗಳಲ್ಲಿ ಬಸವೇಶ್ವರನ ಸ್ವಲ್ಪ ಹಿಂದು ಮುಂದಿನ ಕವಿಗಳು ಕಟ್ಟಿದ ಪುರಾಣಗಳು ಪ್ರಬಲಾಧಾರಗಳು ಎಂದಿದ್ದಾರೆ ಅವರು ಹೇಳಿದ ವಾಕ್ಯಗಳು ಹೀಗಿವೆ:—

"ವಚನಗಳು ವಿಶ್ವಾಸಾರ್ಹವಾದವಾದರೂ, ಅವುಗಳಿಂದ ತಿಳಿದು ಬರುವ ಬಸವಣ್ಣನ ಜೀವನದ ಬಾಹ್ಯ ಸಂಗತಿಗಳು ಬಹು ಸ್ವಲ್ಪ. ಅಷ್ಟೇ ಅಲ್ಲ, ಈ ವಚನಗಳು ಬಿಡಿ ಮಾತುಗಳಾದ್ದರಿಂದ ಅವು ಯಾವ ಸಂದರ್ಭಕ್ಕೆ ಸಂಬಂಧಿಸಿರುವವೆಂಬುದನ್ನು ನಿರ್ಧರಿಸುವುದು ಸುಲಭವಲ್ಲ.

ಆದಕಾರಣ ಈಗಿನ ಕಾಲದವರು ವಚನಗಳಿಂದ ತಿಳಿದು ಬರುವ ಸಂಗತಿಗಳನ್ನೂ, ಪುರಾಣಗಳಲ್ಲಿ ಹೇಳಿರುವ ಸಂಗತಿಗಳನ್ನೂ ಸಮನ್ವಯ ಮಾಡಿಕೊಂಡು ಬಸವಣ್ಣನ ಜೀವನ ಚರಿತ್ರೆಯನ್ನು ನಿರ್ಮಿಸಿಕೊಳ್ಳಬೇಕಾಗಿದೆ.

ವಚನಗಳಲ್ಲಿ ಇಲ್ಲದಿರುವ ಸಂಗತಿಗಳ ವಿಚಾರದಲ್ಲಿ ಪುರಾಣಗಳಲ್ಲಿ ಹೇಳಿರುವುದನ್ನೇ ಪ್ರಮಾಣವಾಗಿ ಸ್ವೀಕರಿಸಬೇಕಾಗುತ್ತದೆ.

ಜನರ ಬಾಯಲ್ಲಿ ಕಥೆ ಬೆಳೆಯುವಾಗ ಕಾಲಕಳೆದಂತೆಲ್ಲ

ಹೆಚ್ಚು ಹೆಚ್ಚು ವ್ಯತ್ಯಾಸಗಳಾಗುವ ಸಂಭವವಿರುವುದರಿಂದ ಈ ಪುರಾಣಗಳಲ್ಲಿ ವ್ಯತ್ಯಾಸ ಕಂಡುಬಂದಾಗ ಈಚಿನ ಪುರಾಣಗಳಿಗಿಂತಲೂ ಹಿಂದಿನ ಪುರಾಣಗಳಿಗೆ ಹೆಚ್ಚು ಪ್ರಾಶಸ್ತ್ಯವನ್ನು ಕೊಡುವುದು ನ್ಯಾಯ ಸಮ್ಮತವಾಗುತ್ತದೆ.

ಒಂದು ಪುರಾಣವು ಎಷ್ಟು ಹಿಂದಿನದೋ ಅಷ್ಟು ಹೆಚ್ಚು ವಿಶ್ವಾಸಾರ್ಹವಾದುದು'' ಎಂದು ಪುರಾಣಗಳ ಪ್ರಾಶಸ್ತ್ಯ ವಿಚಾರದಲ್ಲಿ ತಮ್ಮ ಸ್ಪಷ್ಟಾಭಿಪ್ರಾಯವನ್ನು ವ್ಯಕ್ತಮಾಡಿದ್ದಾರೆ. ಶಿಂಗಿರಾಜ ಪುರಾಣದ ಪ್ರಾಮಾಣ್ಯದ ಬಗ್ಗೆ ಅದರ ಸಂಪಾದಕರಾದ ಶ್ರೀ ಎಚ್. ದೇವೀರಪ್ಪ, ಎಂ. ಎ. ಅವರು ಈ ಕೆಳಗಿನಂತೆ ಬರೆದಿರುತ್ತಾರೆ.

"... ... ಒಟ್ಟಿನಲ್ಲಿ ಇತಿಹಾಸ ದೃಷ್ಟಿಯಿಂದಲೂ ಸಾಹಿತ್ಯ ದೃಷ್ಟಿಯಿದಲೂ ಉತ್ತಮ ವರ್ಗಕ್ಕೆ ಸೇರಿದ ವೀರಶೈವ ಪುರಾಣಗಳಲ್ಲಿ ಇದೊಂದೆಂದು ಹೇಳಬಹುದು"

(ಸಿಂಗಿರಾಜಪುರಾಣಪೀಠಿಕೆ-ಕಾವ್ಯವಿಮರ್ಶೆ xxxi)

ಆದುದರಿಂದ ನಾವು ಈ ಮಾರ್ಗದಲ್ಲಿ ಸತ್ಯವಾದ ಬಸವಚರಿತ್ರೆಯನ್ನು ಕಟ್ಟಲು ಚರಿತ್ರಾಂಶಗಳಿಂದ ಕೂಡಿದ ಮತ್ತು ವಿಮರ್ಶಕಾರರ ಪ್ರಶಂಶೆಗೆ ಪಾತ್ರವಾದ ''ಸಿಂಗಿರಾಜಪುರಾಣ" ( ಅಮಲಬಸವಚಾರಿತ್ರ್ಯ ) ವನ್ನೂ, ಹರಿಹರನ "ಬಸವರಾಜದೇವರ ರಗಳೆ" ಯನ್ನೂ ಅದೇಕಾಲದ ಪಾಲ್ಕುರಿಕೆ ಸೋಮನಾಥನ ಆಂಧ್ರ "ಬಸವ ಪುರಾಣ" ವನ್ನೂ, ಅದರ ಅನುವಾದವಾದ ಭೀಮಕವಿಯ ಕನ್ನಡ "ಬಸವಪುರಾಣ" ವನ್ನೂ, ರಾಘವಾಂಕನ "ಸಿದ್ಧರಾಮ ಚಾರಿತ್ರ್ಯ'' ವನ್ನೂ ಆಧಾರವಾಗಿ ಇಟ್ಟುಕೊಂಡು " **ಲೋಕಾರಾಧ್ಯ ಬಸವಣ್ಣ**" ಗ್ರಂಥವನ್ನು ಸತ್ಯಾಧಾರದ ಮೇಲೆಯೇ ಕಟ್ಟಿದ್ದೇವೆ ಮತ್ತು ಇತ್ತೀಚಿನದೂ ಸತ್ಯಕ್ಕೆ ದೂರವಾದುದೂ ಆದ "ಚೆನ್ನಬಸವಪುರಾಣ" ದ ಅಭಿಪ್ರಾಯವನ್ನು ಖಂಡಿಸಿದ್ದೇವೆ.

ಹೀಗೆ ನಾವು ಸ್ಪಷ್ಟಪಡಿಸಿರುವುದನ್ನು ತುಲನಾತ್ಮಕಬುದ್ಧಿಯಿಂದ ವಿವೇಚಿಸದೆ ಶ್ರೀ ಹರಳೆಣ್ಣೆಯವರು ನಮ್ಮನ್ನು ಕುರಿತು "ನೋಡಿ ಇದೇ ಬಸವಣ್ಣ

ನವರ ಸತ್ಯ ಚರಿತ್ರೆ" ಎಂಬಂತೆ ಹೇಳುವ ಸಾಹಸ ಮಾಡಿರುತ್ತಾರೆ, ಎಂದು ಆಕ್ಷೇಪಣೆಮಾಡಿರುತ್ತಾರೆ. ಹೀಗೆ ಇವರು ಉದ್ಧೃತ ಚಿಹ್ನೆಯಲ್ಲಿ ಸೂಚಿಸಿರುವ ವಾಕ್ಯಪಂಕ್ತಿಯು ನಮ್ಮ 'ಲೋಕಾರಾಧ್ಯ ಬಸವಣ್ಣ' ಗ್ರಂಥದಲ್ಲಿ ಬಂದೇ ಇಲ್ಲ. ನಾವು ಬಸವಪುರಾಣದಲ್ಲಿ ಬಂದಿರುವ ಹೊಸ ಹೊಸ ವಿಚಾರಗಳನ್ನು ಸಾಹಿತಿಗಳಿಗೆ ಎತ್ತಿ ತೋರಿಸುವ ಪ್ರಯತ್ನವನ್ನು ಮಾಡಿದ್ದೇವೆಯೇ ವಿನಾ, ಇವರು ಕೆಣಕಿ ಸುಳ್ಳೇ ಬರೆದಿರುವಂತೆ ಸಾಹಸವನ್ನೇನೂ ಮಾಡಿಲ್ಲ.

ನಾವು ಬರೆದಿರುವಂತೆ, "ಬಸವಣ್ಣನವರ ಸತ್ಯಚರಿತ್ರೆ ಹೀಗೆಯೇ ಇದ್ದಿತೆಂದು ನಿರ್ಣಯ ಮಾಡುವುದು ಇಂದಿಗೂ ಅಸಾಧ್ಯ" ಎಂಬ ಮಾತು ಇಂದಿಗೂ ಸತ್ಯವಾಗಿಯೇ ಇದೆ. ಈ ಬಗ್ಗೆ ಅನೇಕ ಸಾಹಿತಿಗಳು ನಮ್ಮ ಅಭಿಪ್ರಾಯದಂತೆಯೇ ತಮ್ಮ ಅಭಿಪ್ರಾಯಗಳನ್ನೂ ವ್ಯಕ್ತಪಡಿಸುತ್ತಲಿದ್ದಾರೆ.

ಧಾರವಾಡದ ಶ್ರೀ ಎಂ. ಎಸ್. ಸ್ವಾಮಿ, ಎಂ. ಎ. ಎಂಬುವರು ಶರಣ ಸಾಹಿತ್ಯ ಪತ್ರಿಕೆಯ ಸೆಪ್ಟಂಬರ ೧೯೬೭ ನೇ ಸಂಚಿಕೆಯಲ್ಲಿ "ಬಸವಣ್ಣ ನವರನ್ನು ಕುರಿತು ಅರ್ಜುನವಾಡ ಶಿಲಾಶಾಸನ" ಎಂಬ ಲೇಖನವನ್ನು ಬರೆದು "ಬಸವಣ್ಣನವರ ದಿವ್ಯ ಜೀವನ ಚರಿತ್ರೆಯು ನಮಗೆ ನಿಷ್ಪಷ್ಟವಾಗಿ ತಿಳಿದು ಬರುವುದಿಲ್ಲ. ಅವರನ್ನು ಕುರಿತು ಬರೆದ ಕೆಲವು ವೀರಶೈವ ಪುರಾಣಗಳು ಮತ್ತು ಕೆಲವು ಶಾಸನಗಳು ಒಂದಕ್ಕೊಂದು ಭಿನ್ನಾಭಿಪ್ರಾಯಗಳನ್ನು ಸೂಚಿಸಿರುವುದರಿಂದ ಇದಮಿತ್ಥಂ ಎಂದು ಅಂಗೀಕರಿಸುವವರ ಮಟ್ಟಿಗೆ ಅವರ ಶುದ್ಧ ಜೀವನಸಂಗತಿಯನ್ನು ಅವುಗಳಿಂದ ಪಡೆದುಕೊಳ್ಳುವುದು ಸಾಧ್ಯವಿಲ್ಲ. ಆದಕಾರಣ ಬಸವಣ್ಣನವರು ಒಬ್ಬ ಐತಿಹಾಸಿಕ ವ್ಯಕ್ತಿಗಳೆ? ಎಂಬ ಸಂದೇಹ ಕೆಲವೊಮ್ಮೆ ಮನಸ್ಸಿನಲ್ಲಿ ಬಂದುಹೋಗುತ್ತದೆ." ಎಂದು ತಮ್ಮ ಸ್ಪಷ್ಟಾಭಿಪ್ರಾಯವನ್ನು ವ್ಯಕ್ತಪಡಿಸಿರುತ್ತಾರೆ. ಇದಕ್ಕೆ ಶರಣಸಾಹಿತ್ಯ ಪತ್ರಿಕೆಯ ಸಂಪಾದಕರಾದ ಶ್ರೀ ಪಂಡಿತರತ್ನಂ, ಪದ್ಮಶ್ರೀ ಬಿ. ಶಿವಮೂರ್ತಿಶಾಸ್ತ್ರಿಗಳು ಕೆಳಗೆ ಟಿಪ್ಪಣಿ ಬರೆದು "ಈ ಮಾತು ಪ್ರಭುದೇವರು, ಚೆನ್ನಬಸವಣ್ಣ, ಸಿದ್ಧರಾಮ ಮೊದಲಾದ ಇತರ ಶರಣರಿಗೂ ಅನ್ವ

ಯಿಸುತ್ತದೆ." ಎಂದು ತಮ್ಮ ಶರಣಸಾಹಿತ್ಯಾನುಭವದ ಅಭಿಪ್ರಾಯವನ್ನು ಕೊಟ್ಟಿರುತ್ತಾರೆ. ಶ್ರೀ ಎಂ. ಎಸ್. ಸ್ವಾಮಿಯವರು ಮುಂದುವರಿದು "ಬಸವಣ್ಣನವರಿಗೆ ಸಂಬಂಧಿಸಿದ ಏಳು ಶಾಸನಗಳಾದರೂ ಅವರ ಚರಿತ್ರೆಯ ಮೇಲೆ ಅಷ್ಟೊಂದು ತೃಪ್ತಿಕರವಾದ ಬೆಳಕನ್ನು ಚೆಲ್ಲದಿದ್ದರೂ ಅರ್ಜುನವಾಡ ಶಿಲಾಶಾಸನ ಮಾತ್ರ ಕೆಲವೊಂದು ಐತಿಹಾಸಿಕ ಅಂಶಗಳನ್ನು ನೀಡುವ ಚಾರಿತ್ರಿಕ ಮೈಲುಗಲ್ಲಾಗಿದೆ" ಎಂದು ಬರೆದಿರುತ್ತಾರೆ. ಆದರೆ ಆ ಶಾಸನದಲ್ಲಿ ಕೆಲವು ಹೆಸರುಗಳನ್ನು ಜೋಡಿಸಿ ಓದಿಕೊಳ್ಳುವುದೇ ಸಾಕುಸಾಕಾಗಿ ಹೋಗಿದೆ. ಆದುದರಿಂದಲೇ ಟಿ. ಎಸ್. ವೆಂಕಣ್ಣಯ್ಯನವರು "............... ವಚನಗಳಿಂದ ತಿಳಿದು ಬರುವ ಸಂಗತಿಗಳನ್ನೂ, ಪುರಾಣಗಳಲ್ಲಿ ಹೇಳಿರುವ ಸಂಗತಿಗಳನ್ನೂ ಸಮನ್ವಯಮಾಡಿಕೊಂಡು ಬಸವಣ್ಣನ ಜೀವನ ಚರಿತ್ರೆಯನ್ನು ನಿರ್ಮಿಸಿಕೊಳ್ಳಬೇಕಾಗಿದೆ." ಎಂದು ನಿರ್ದುಷ್ಟ ಹಾಗೂ ವಿವೇಚನಾತ್ಮಕವಾದ ತಮ್ಮ ಅಭಿಪ್ರಾಯವನ್ನು ಪ್ರಕಟಪಡಿಸಿರುತ್ತಾರೆ. ಹೀಗೆ ಬಸವಣ್ಣನವರ ಜೀವನ ಚರಿತ್ರೆಯನ್ನು ಸಂಶೋಧಿಸಿ ಪ್ರಕಟಿಸುವುದು ಎಂತಹ ಕಷ್ಟಸಾಧ್ಯವಾದ ಕೆಲಸವೆನ್ನುವುದು ಸಾಹಿತ್ಯಸಂಶೋಧಕರಿಗೆ ಮಾತ್ರ ಗೊತ್ತಾಗುತ್ತದೆ. ಆದುದರಿಂದ ಶ್ರೀ ಹರಳೆಣ್ಣೆಯವರು ನಮ್ಮ ಮೇಲೆ ಆಕ್ಷೇಪಿಸಿ ಬರೆದಿರುವ "ಇತರ ಆಧಾರಗಳನ್ನು ಕಡೆಗಣಿಸಿ ಪುರಾಣ-ಕಾವ್ಯಗಳನ್ನು ಆಧರಿಸಿ ಇವರು ಬರೆದಿರುವ ವಿಷಯಗಳೆಲ್ಲಾ ಸತ್ಯಕ್ಕೆ ದೂರವಾಗಿವೆ" ಎಂಬ ಮಾತುಗಳು ಅಸಮಂಜಸ ಹಾಗೂ ವಿವೇಕಶೂನ್ಯವಾಗಿವೆ ಎನ್ನುವುದನ್ನು ಯಾರಾದರೂ ತಿಳಿದುಕೊಳ್ಳಬಹುದಾಗಿದೆ.

ಹೀಗೆ ಸಾಧಾರವಾಗಿ ಬರೆಯಲ್ಪಟ್ಟ "ಲೋಕಾರಾಧ್ಯಬಸವಣ್ಣ" ಗ್ರಂಥವು ಶ್ರೀ ಹರಳೆಣ್ಣೆಯವರಿಗೆ ಸತ್ಯದೂರವಾಗಿದೆಯಂತೆ! ಕವಿಪ್ರಪಂಚಕ್ಕೆ ಇವರು ಒಳ್ಳೆಯ ಸೂಚನೆ ಕೊಟ್ಟಿದ್ದಾರೆ. ರಾಘವಾಂಕ ಮೊದಲಾದ ಕವಿಗಳ ಕಾಲದಲ್ಲಿ ಇಂತಹ ಸೂಚನೆ ಕೊಡುವವರು ಯಾರಾದರೂ ಹುಟ್ಟಿದ್ದರೆ, ಪುರಾಣಗಳಲ್ಲಿ ಬರೆದಿಟ್ಟಿರುವ ವ್ಯಕ್ತಿಚರಿತ್ರೆಯನ್ನು ಕಲ್ಲಿನಲ್ಲಿಯೋ, ತಗಡಿನಲ್ಲಿಯೋ

ಪೂರ್ಣವಾಗಿ ಕೆತ್ತಿಸಿ ಇಡುತ್ತಿದ್ದರು. ಆದರೆ ಇಂತಹ ಸೂಚಕರು ಆ ಕಾಲದಲ್ಲಿ ಇಲ್ಲದುದರಿಂದ ತಾಡೋಲೆ, ಕೋರಿಕಾಗದ ಮುಂತಾದವುಗಳಲ್ಲಿ ಬರೆಪು ತಪ್ಪುಮಾಡಿದರೆನ್ನಬೇಕಲ್ಲವೆ? ಹಾಗಾದರೆ ಶ್ರೀ ಹರಳೆಣ್ಣೆಯವರು ಈಗಿರುವ ಶ್ರೇಷ್ಠ ಸಾಹಿತಿಗಳನ್ನೂ, ಮಹಾಕವಿಗಳನ್ನೂ ಶೀಘ್ರವಾಗಿ ಒಂದೆಡೆ ಸೇರಿಸಿ ಹಳೇ ಪುರಾಣಗಳೆಲ್ಲ ನಿರಾಧಾರಗಳೆಂದು ತೀರ್ಮಾನಿಸಿದರೆ ಮುಂದಿನ ಸಾಹಿತಿಗಳಿಗೆ ಉಪಕಾರಮಾಡಿದಂತಾದೀತು! ಹೀಗೆ ಮಾಡಿದರೆ ಸಾಹಿತಿಗಳು ಪುರಾಣ ಸಾಹಿತ್ಯದ ಕಟ್ಟನ್ನು ಬಿಚ್ಚುವ ಗೋಜಿಗೇ ಹೋಗದಂತಾಗುವುದು. ಲೆಕ್ಕಣಿಕೆಯಿಂದ ಅಕ್ಷರಗಳನ್ನು ಜಾರಿಸುವಾಗ ಪೂರ್ವಾಪರ ವಿಚಾರಬೇಕು! ಆಳವಾದ ಅಭ್ಯಾಸಬೇಕು! ಅಪಾರ ಅನುಭವಬೇಕು! ಆದರೆ ಇವರಿಗೆ ಪುರಾಣಗಳ ಮೇಲೆ ದ್ವೇಷವಲ್ಲ; ಗುರು-ಜಂಗಮರಮೇಲೆ ದ್ವೇಷ! ವಂಶಪರಂಪರಾಗತರಾದ ಮಾಹೇಶ್ವರರಮೇಲೆ ಸಹಿಸಲಾರದ ದ್ವೇಷದಿಂದ ಇವರು ಮನ ಬಂದಂತೆ ಬರೆದರೆ ಮಾನ್ಯಮಾಡುವವರಾರು?

"ಲೋಕಾರಾಧ್ಯ ಬಸವಣ್ಣ'' ಗ್ರಂಥದಲ್ಲಿ ನಾವು ಮಾಹೇಶ್ವರರೂ, ಭಕ್ತರೂ ಗುರು-ಶಿಷ್ಯರೆಂತಲೂ; ಬಸವಣ್ಣನವರ ಅಭಿಪ್ರಾಯದಲ್ಲಿ ಸ್ವಾಮಿ ಭೃತ್ಯರೆಂತಲೂ ವಿವರಿಸಿದ್ದರೆ, ಅದನ್ನು ಶ್ರೀ ಹರಳೆಣ್ಣೆಯವರು ಅಪಾರ್ಥ ಮಾಡಿ, ಗ್ರಂಥಕರ್ತರು ಜಂಗಮರನ್ನು ಮೇಲುಮಾಡಿ ಭಕ್ತರನ್ನು ಕೀಳು ಮಾಡಿ ಬರೆದಿದ್ದಾರೆಂದು ದ್ವೇಷಬುದ್ಧಿಯಿಂದ ಕಲ್ಪಿಸಿಕೊಂಡು ಜನತೆ ರೊಚ್ಚಿಗೇಳುವಂತೆ ಹುರಿದುಂಬಿಸಿದ್ದಾರೆ. ಇವರು ಕಲ್ಪಿಸಿಕೊಂಡಿರುವ ಈ ವಾಕ್ಯವನ್ನು "ಲೋಕಾರಾಧ್ಯ ಬಸವಣ್ಣ'' ಗ್ರಂಥದಲ್ಲಿ ತೋರಿಸಿಕೊಟ್ಟರೆ ಇವರು ಧನ್ಯಜೀವಿಗಳಾಗಬಹುದು.

ಶ್ರೀ ಹರಳೆಣ್ಣೆಯವರ ಆಕ್ಷೇಪಣೆಗಳೂ ಅವುಗಳಿಗೆ ನಮ್ಮ ಉತ್ತರಗಳೂ ಈ ಕೆಳಗಿನಂತಿವೆ :—

(೧) ನೆಯ ಆಕ್ಷೇಪ :—

**ಶ್ರೀ ರೇವಣಸಿದ್ಧಾದಿ ಐದು ಜನರೇ ವೀರಶೈವ ಮತಸ್ಥಾಪಕರಲ್ಲ.**

**ಇದಕ್ಕೆ ನಮ್ಮ ಉತ್ತರ :—**

# ಶ್ರೀ ರೇವಣಸಿದ್ಧಾದಿ ಪಂಚಾಚಾರ್ಯರೇ ವೀರಶೈವಮತಸ್ಥಾಪಕರು.

ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ವೀರಶೈವಮತ ಸ್ಥಾಪಕರೆಂಬುದನ್ನು ನಾವೇ ನಿರ್ಣಯಮಾಡಿಲ್ಲ. ವೇದ, ಆಗಮ, ಪುರಾಣ ಕಾಲಗಳಿಂದ ಆಧಾರ ಸಮೇತವಾಗಿ ಮಹಾ ಮಹಾ ಪಂಡಿತರು ಈ ವಿಚಾರ ವನ್ನು ಕುರಿತು ಅನೇಕ ಗ್ರಂಥಗಳನ್ನು ಬರೆದಿದ್ದಾರೆ. ಆ ಆಧಾರಗಳನ್ನೆಲ್ಲ ಇಲ್ಲಿ ಉದ್ಧರಿಸುತ್ತ ಹೋದರೆ ಆ ಭಾಗವೇ ಒಂದು ಉದ್ಗ್ರಂಥವಾಗಬಹುದು ಆದುದರಿಂದ ಈ ನಿರ್ಣಯಕ್ಕೆ ಬೇಕಾದ ಶಿವಾಗಮಾಧಾರಗಳನ್ನು ಸಂಕ್ಷೇಪ ವಾಗಿ ಇಲ್ಲಿ ವಿವರಿಸಲಾಗಿದೆ.

ಕೈಲಾಸಪತಿ ಶಂಕರನು ವೀರಶೈವಮತೋತ್ಪತ್ತಿಗಾಗಿ ಈ ಪಂಚಾಚಾ ರ್ಯರನ್ನೇ ಕಳಿಸಿದನೆಂಬುದಕ್ಕೆ ಶಿವಾಗಮಾಧಾರವಿದೆ—

ರೇವಣೋ ಮರುಲಶ್ಚೈಕೋರಾಮಃ ಪಂಡಿತ ಏವಚ।
ವಿಶ್ವಾರಾಧ್ಯ ಇತಿ ಪ್ರೋಕ್ತಃ ಕಲಾವಪಿ ಮಮಪ್ರಿಯೇ ॥೭೪॥
"ವೀರಶೈವಮತೋತ್ಪತ್ತಿ"ಹೇತವ್ಯೈತಾಂಶ್ಚ ಪಂಚಕಾನ್।
ಮನ್ಮುಖೇಭ್ಯಃ ಸಮುತ್ಪಾದ್ಯ ತೈರೇವಾಕರ್ಷಮಂಜಸಾ॥ ॥೭೫॥

(ವೀರಶೈವ ಸದಾಚಾರಸಂಗ್ರಹ ಪ್ರ. ೧)

ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರಲ್ಲದೆ ಬೇರೆಯವರು ವೀರಶೈವಮತವನ್ನು ಸ್ಥಾಪಿಸಿದರೆಂಬುದಕ್ಕೆ ಶಿವಾಗಮಗಳಲ್ಲಿ ಆಧಾರವಿಲ್ಲ.

ಈ ಶಿವಾಗಮಗಳು ವೇದಕ್ಕೆ ಸಮಾನವಾದವುಗಳೆಂದೂ, ಇವು ಪರಮ ಪ್ರಮಾಣ ಗ್ರಂಥಗಳೆಂದೂ ಶ್ರೀ ರೇಣುಕಾಚಾರ್ಯರು ಅಗಸ್ತ್ಯರಿಗೆ ಬೋಧಿಸಿ ದ್ದಾರೆ. ಆ ಬೋಧೆ ಹೀಗಿದೆ :—

ವೇದ–ಸಿದ್ಧಾಂತಯೋರೈಕ್ಯಮೇಕಾರ್ಥಪ್ರತಿಪಾದನಾತ್।
ಪ್ರಾಮಾಣ್ಯಂ ಸದೃಶಂಜ್ಞೇಯಂ ಪಂಡಿತೈರೇತಯೋಸ್ಸದಾ ॥೧೪॥

(ಸಿದ್ಧಾಂತ ಶಿಖಾಮಣಿ ಪರಿ–೫.)

ಕೈ॥ ಶ್ರೀಮಾನ್ ಹರ್ಡೇಕರ ಮಂಜಪ್ಪನವರು ಶಿವಾಗಮ ಪ್ರಮಾಣದ ಬಗ್ಗೆ ಈ ಕೆಳಗಿನಂತೆ ವಿವರಿಸಿದ್ದಾರೆ :—

"ಕಾಮಿಕಾದಿ ವಾತುಲಾಂತ ೨೮ಶಿವಾಗಮಗಳೇ ವೀರಶೈವರಿಗೆ ಪ್ರಮಾಣ ಗ್ರಂಥಗಳೆಂಬ ವಿಷಯದಲ್ಲಿ ಭಿನ್ನಾಭಿಪ್ರಾಯವೇ ಇಲ್ಲ. ಮತ್ತು ಈ ಶಿವಾಗಮಗಳು ೧೨ ನೆಯ ಶತಮಾನಕ್ಕಿಂತಲೂ ಪೂರ್ವದ ಗ್ರಂಥಗಳೆಂಬ ಅಂಶವನ್ನು ಎಂತಹ ವಿತಂಡವಾದಿಯೂ ಕೂಡ ಒಪ್ಪದಿರಲಾರನು."

(ಬಸವ ಚರಿತ್ರೆ)

ಆದುದರಿಂದ ನಾವು ಶಿವಾಗಮಾಧಾರಪೂರ್ವಕ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರೇ ವೀರಶೈವ ಮತಸ್ಥಾಪಕರೆಂದು ಈಗಲೂ ಈ ಮುಂದೆಯೂ ಘಂಟಾಘೋಷವಾಗಿ ಸಾರುತ್ತಿರುವೆವು.

(೨) ನೆಯ ಆಕ್ಷೇಪ :—

**ಬಸವಣ್ಣನವರ ಕಾಲಕ್ಕೆ ಇವರ ಪರಂಪರೆ ಉಚ್ಛ್ರಾಯ ಸ್ಥಿತಿಯಲ್ಲಿತ್ತೆಂಬುದು ಸುಳ್ಳು.**

**ಇದಕ್ಕೆ ನಮ್ಮ ಉತ್ತರ:—**

## ಬಸವಣ್ಣನವರ ಕಾಲಕ್ಕೆ ಶ್ರೀ ಜಗದ್ಗುರು ಪಂಚಾಚಾರ್ಯರ ಪರಂಪರೆ ಉಚ್ಛ್ರಾಯ ಸ್ಥಿತಿಯಲ್ಲಿತ್ತು

ಹೀಗೆ ಬರೆಯುವುದು ಇವರ ಅನಭ್ಯಾಸದ ಫಲ. ರಾಘವಾಂಕ ಮಹಾಕವಿಯ ಸಿದ್ಧರಾಮ ಚಾರಿತ್ರ್ಯಕಾವ್ಯವನ್ನು ಅವಲೋಕಿಸಿದರೆ, ರೇವಣಸಿದ್ಧರು ಸಿದ್ಧರಾಮೇಶ್ವರನು ಹುಟ್ಟುವುದಕ್ಕಿಂತಲೂ ಮುಂಚೆ ಸೊಲ್ಲಾಪುರಕ್ಕೆ ಬಂದು ಆಶೀರ್ವಾದ ಮಾಡಿದ ವಿಚಾರ ಸ್ಪಷ್ಟವಿರುವಾಗ, ಈ ವೃದ್ಧರಾದ ರೇವಣಸಿದ್ಧರು ಬಸವೇಶ್ವರ, ಸಿದ್ಧರಾಮ ಇವರ ಜನನಕ್ಕಿಂತ ಮುಂಚೆಯೇ ವೀರಶೈವಧರ್ಮಪ್ರಸಾರ ಮಾಡುತ್ತಿದ್ದುದು ಸ್ಪಷ್ಟವಾಗುತ್ತದೆ. ಅದೇಪ್ರಕಾರ

ಶ್ರೀಶೈಲಪೀಠದ ಶ್ರೀಪತಿಪಂಡಿತಾರಾಧ್ಯರು ಬಸವೇಶ್ವರನಿಗಿಂತ ಪೂರ್ವವೇ ವೀರಶೈವ ಧರ್ಮಪ್ರಸಾರ ಮಾಡುತ್ತಿದ್ದುದು ಬೆಜವಾಡದಲ್ಲಿರುವ ಶಿಲಾಶಾಸನ ದಿಂದ ಸ್ಪಷ್ಟವಾಗುವುದಲ್ಲದೆ, ಈ ವಿಷಯವು ತೆಲುಗು ಮತ್ತು ಕನ್ನಡ ಬಸವ ಪುರಾಣಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಸ್ವತಃ ಬಸವೇಶ್ವರನು ತನಗಿಂತ ಪೂರ್ವದ ಮಹಿಮರ ಚರಿತ್ರೆಯನ್ನು ಬಿಜ್ಜಳನ ಮುಂದೆ ಸ್ಪಷ್ಟಪಡಿಸು ವಾಗ ಭೀಮಕವಿಯ 'ಬಸವ ಪುರಾಣ'ದ ಸಂಧಿ ೫೩ ರಲ್ಲಿ ಉಪಮನ್ಯು ವು ಶ್ರೀ ಕೃಷ್ಣನಿಗೆ ಇಂದ್ರನೀಲಲಿಂಗವನ್ನಿತ್ತು ದೀಕ್ಷೆ ಮಾಡಿದ ವಿಚಾ ರವೂ, ಮತ್ತು ಸಂಧಿ ೫೪ ರಲ್ಲಿ ಶ್ರೀಪತಿಪಂಡಿತರು ಬೆಜವಾಡದ ಅನಂತಪಾಲನೃಪಾಲನ ಮುಂದೆ ಶಿವಾಧಿಕ್ಯವನ್ನುಸಾರಿ ಬನ್ನೀ ಮರಕ್ಕೆ ರೇಶ್ಮೆಬಟ್ಟೆಯಲ್ಲಿ ಬೆಂಕಿಯನ್ನು ಹಾಕಿ ಕಟ್ಟಿದ ಮಹಿ ಮೆಯ ವಿಚಾರವೂ, ಉದ್ಭಟಾರಾಧ್ಯರೆಂಬುವರು ಭೋಜರಾಜನಿಗೆ ಶಿವದೀಕ್ಷೆಮಾಡಿ ಆತನಿಗೆ ಗುರುಗಳಾಗಿದ್ದರೆಂಬ ವಿಚಾರವೂ ಉಲ್ಲೇ ಖಿಸಲ್ಪಟ್ಟಿವೆ. ವೀರಶೈವಾಗ್ರಣಿಯಾದ ದೇವಲ ಮಹರ್ಷಿಯು ಯುಗಾಂತರಕಾಲದವನೆಂದು ಸಿಂಗಿರಾಜಪುರಾಣದ ಆಧಾರದಮೇಲೆ ನಾವು ಈ ಹಿಂದೆಯೇ ಲೋಕಾರಾಧ್ಯಬಸವಣ್ಣ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದೇವೆ. ವೀರಶೈವಾಗ್ರಣಿ ದೇವಲಋಷಿಯ ಹೆಸರನ್ನು ಅರ್ಜುನನು ಭಗವದ್ಗೀತೆಯ ೧೦ ನೆಯ ಅಧ್ಯಾಯ ೧೩ ನೆಯ ಶ್ಲೋಕದಲ್ಲಿ :—

"ಆಹುಸ್ತ್ವಾಂ ಋಷಯಸ್ಸರ್ವೇ ದೇವರ್ಷಿರ್ನಾರದಸ್ತಥಾ
ಅಸಿತೋ ದೇವಲೋ ವ್ಯಾಸಃ ಸ್ವಯಂಚೈವ ಬ್ರವೀಷಿಮೇ॥ ॥೧೩॥

ಎಂದು ಅಸಿತ ಮತ್ತು ವ್ಯಾಸನ ಜೊತೆಗೆ ದೇವಲ ಮಹರ್ಷಿಯ ಹೆಸ ರನ್ನು ಎತ್ತಿಕೊಂಡಿದ್ದಾನೆ. ಇದರಿಂದ ವೀರಶೈವಾಗ್ರಣಿಯಾದ ಈ ದೇವಲನು ಕೊನೆಯಪಕ್ಷ ಅರ್ಜುನನ ಸಮಕಾಲೀನನೆಂದು ನಿರ್ಧರವಾಗುತ್ತದೆ.

ಬಸವೇಶ್ವರನ ಸಮಕಾಲದಲ್ಲಿ ಅದ್ಭುತವಾಗಿ ವೀರಶೈವ ಧರ್ಮಪ್ರಚಾರ ನಡೆಸುತ್ತಿದ್ದ ಶ್ರೀಶೈಲ ಜಗದ್ಗುರು ಮಲ್ಲಿಕಾರ್ಜುನಪಂಡಿತಾರಾಧ್ಯರ ವಿಚಾ

ರವು ಸೋಮನಾಥಕೃತ " ಮಲ್ಲಿಕಾರ್ಜುನಪಂಡಿತಾರಾಧ್ಯಚರಿತ್ರೆ " ಎಂಬ ಮಹಾಕಾವ್ಯದಲ್ಲಿ ಸ್ಪಷ್ಟವಾಗಿ ಬಂದಿದೆ.

ಮಹಾನುಭಾವಿಗಳಾದ ಬಸವಣ್ಣನವರ ವಚನಗಳು ಇಲ್ಲಿಯವರೆಗೆ ೧೧೬೦ ಮಾತ್ರ ಸಂಗ್ರಹವಾಗಿವೆ. ಆದರೆ ಭೀಮ ಕವಿಯ ಬಸವಪುರಾಣದ (ಸಂಧಿ ೨೧) ಪ್ರಕಾರ ಬಸವಣ್ಣನವರು ರಚಿಸಿದ ವಚನಗಳು ೪೬೦೦೦. ಆ ಎಲ್ಲವಚನಗಳೂ ಸಿಕ್ಕರೆ ಇನ್ನೂ ಎಷ್ಟೋ ಹೊಸ ವಿಚಾರಗಳು ಹೊರಬಿದ್ದು ಜಗತ್ತಿಗೆ ಉಪಕಾರವಾದೀತು! ಬಸವಣ್ಣನವರ ಅನೇಕ ವಚನಗಳು ಕಣ್ಮರೆಯಾಗಲಿಕ್ಕೆ ಏನೋ ಪ್ರಬಲವಾದ ಕಾರಣವಿರಬೇಕು. ಬಸವಣ್ಣನವರ ಅನುಯಾಯಿಗಳೆಂದು ಹೇಳಿಸಿಕೊಳ್ಳುವವರು ತಮ್ಮ ಪಟ್ಟಭದ್ರಹಿತಾಸಕ್ತಿಗೆ ಧಕ್ಕೆ ಬಂದೀತೆಂದು ಭಾವಿಸಿ ಪೀಠಾಚಾರ್ಯರ ಮತ್ತು ಬಸವಣ್ಣನವರ ಗುರುಪರಂಪರಾಪರವಾಗಿದ್ದ ವಚನಗಳನ್ನು ಸದ್ದಿಲ್ಲದೆ ಕೈಯಾಡಿಸಿ ಕಾಣೆಮಾಡಿರಬಹುದೆಂದು ನಾವು ಭಾವಿಸಿದರೆ ತಪ್ಪಾಗಲಿಕ್ಕಿಲ್ಲ. ನಮ್ಮಲ್ಲಿ ಈ ಭಾವನೆ ಮೂಡಲಿಕ್ಕೆ ಶ್ರೀ ಹರಳೆಣ್ಣೆಯವರ ಬರವಣಿಗೆಯೇ ಕಾರಣವಾಗಿದೆ. "ಶ್ರೀ ರೇವಣಸಿದ್ಧಾದಿಗಳು ಬಸವಣ್ಣನವರ ಕಾಲಕ್ಕೆ ಅಥವಾ ಅದಕ್ಕೂಮುನ್ನ ಪ್ರಸಿದ್ಧರಾಗಿ ಪೂಜನೀಯರಾಗಿದ್ದರೆ ಬಸವಣ್ಣನವರಿಗೆ ತಿಳಿದಿರಲೇಬೇಕು. ತಿಳಿದಿದ್ದರೆ ಒಂದಿಲ್ಲೊಂದು ತಮ್ಮ ವಚನದಲ್ಲಿ ಅವರುಗಳ ಹೆಸರುಗಳನ್ನು ಉಲ್ಲೇಖಿಸದೆ ಬಿಡುತ್ತಿರಲಿಲ್ಲ" ಎಂದು ಅವರು ಸಂದೇಹಗ್ರಸ್ತರಾಗಿದ್ದಾರೆ. ಮತ್ತು ಅವರೇ ಇನ್ನೊಂದುಕಡೆ "ಕಾಲ ಕಾಲಕ್ಕೆ ಪೂರ್ವಗ್ರಂಥಗಳಮೇಲೆ ಜನರು ಸಾಕಷ್ಟು ಕೈಯಾಡಿಸಿರುವರೆಂಬುದಕ್ಕೆ ನಿದರ್ಶನಗಳ ಕೊರತೆಯಿಲ್ಲ" ಎಂದು ಬರೆದು ಮೇಲಿನ ಸಂದೇಹನಿವಾರಣೆಗೆ ಅವಕಾಶ ಮಾಡಿಕೊಟ್ಟಿರುತ್ತಾರೆ. ಆದುದರಿಂದ ನಾವು ಮೇಲೆಭಾವಿಸಿದ ಪ್ರಕಾರ ಪೀಠಾಚಾರ್ಯರಪರವಾದ ಬಸವಣ್ಣನವರ ವಚನಗಳು ಕಣ್ಮರೆಯಾಗಿದ್ದರೆ, ಬಸವಣ್ಣನವರ ಸಮಕಾಲೀನ ಶಿವಶರಣರ ವಚನಗಳಲ್ಲಾದರೂ ಪೀಠಾಚಾರ್ಯರ ಪ್ರಶಂಸೆ ಬಂದಿದೆಯೋ ಇಲ್ಲವೇ; ಎಂದು ನೋಡಬೇಕು. ಹಾಗೆ ಬಂದಿದ್ದರೆ ಬಸವಣ್ಣನವರ ವಚನಗಳಲ್ಲಿಯೂ ಸಹ ಪೀಠಾಚಾರ್ಯರ ಪ್ರಶಂಸೆ ಇದ್ದಿರಲೇಬೇಕೆಂದು

ಭಾವಿಸಬೇಕು. ಪುರಾಣಗಳಲ್ಲಿ ರೇವಣಸಿದ್ಧಾದಿಗಳ ಮಹಿಮೆಯನ್ನು ಬಸವಣ್ಣನವರು ಹೊಗಳಿದಂತೆ ವರ್ಣನೆಇದೆ. ಆದುದರಿಂದ ಅವರು ತಮ್ಮ ವಚನಗಳಲ್ಲಿ ಸಹ ಪೀಠಾಚಾರ್ಯರನ್ನು ಹೊಗಳಿರಲೇಬೇಕು. ಆದರೆ ಶ್ರೀ ಹರಳಿಣ್ಣಿಯವರ ಸಂದೇಹದಂತೆ ಅವು ಕಾರಣಾಂತರದಿಂದ ಮರೆಯಾಗಿರಲೇಬೇಕು ಅಷ್ಟೇ!

ಬಸವಕಾಲೀನ ಶಿವಶರಣರು ರೇವಣಸಿದ್ಧಾದಿಗಳನ್ನು ತಮ್ಮ ವಚನಗಳಲ್ಲಿ ಕೊಂಡಾಡಿರುವುದು ಈ ಕೆಳಗಿನಂತಿದೆ.

ಶ್ರೀ ಬಸವತೀರ್ಥ ಸ್ವಾಮಿಗಳೆಂಬವರು ಸಂಕಲನ ಮಾಡಿದ "ಪುರಾತನರ ವಚನ" ಎಂಬ ಗ್ರಂಥದಲ್ಲಿ ಅಕ್ಕನಾಗಮ್ಮನವರ ವಚನ ಹೀಗಿದೆ:—

"ಅಂಗದಿಂದುದಯವಾದಾತ ಮಡಿವಾಳಯ್ಯ
ಲಿಂಗದಿಂದುದಯವಾದಾತ ರೇವಣಸಿದ್ಧಯ್ಯ
ಭಸ್ಮದಿಂದುದಯವಾದಾತ ಸಿದ್ಧರಾಮಯ್ಯ
ಪಾದೋದಕದಿಂದುದಯವಾದವಳು ಅಕ್ಕಮಹಾದೇವಿ
ಮಂತ್ರದಿಂದುದಯವಾದಾತ ನಿಮ್ಮ ಸೋದರಮಾವ ಬಸವಯ್ಯ
ಪ್ರಸಾದದಿಂದುದಯವಾದಾತ ನೀನಲ್ಲವೆ ಚೆನ್ನಬಸವಯ್ಯ?
ಚೆನ್ನಬಸವಣ್ಣಪ್ರಿಯ ಕೂಡಲಚೆನ್ನಸಂಗಮದೇವ ॥ ॥೨೪॥

ಡಾ॥ ಶ್ರೀ ಆರ್. ಸಿ. ಹಿರೇಮಠ ಅವರು ಸಂಪಾದಿಸಿದ ಆದಯ್ಯನವರ ವಚನದಲ್ಲಿ ಹೀಗಿದೆ:—

"ಬಸವಣ್ಣನೆನ್ನ ಅಂಗ. ಮಡಿವಾಳನೆನ್ನ ಮನ, ಪ್ರಭುವೆನ್ನ ಪ್ರಾಣ, ನಿಜಗುಣನೆನ್ನ ಕ್ಷಮೆ, ರೇವಣಸಿದ್ಧ ದೇವರೆನ್ನ ಪುಣ್ಯನೇತ್ರ, ಸಿದ್ಧರಾಮತಂದೆಗಳೆನ್ನ ನೇತ್ರದದೃಕ್ಕು, ಮರುಳಸಿದ್ಧದೇವರೆನ್ನ ಶ್ರೋತ್ರ, ಪಂಡಿತಾರಾಧ್ಯರೆನ್ನ ಜಿಹ್ವೆ, ಏಕೋರಾಮಯ್ಯಗಳೆನ್ನ ನಾಶಿಕ, ಅಸಂಖ್ಯಾತರೆನ್ನ ಅವಯವಗಳು......... ಸೌರಾಷ್ಟ್ರ ಸೋಮೇಶ್ವರಾ ॥೨೮೨॥

ಆದಯ್ಯನವರ ಇನ್ನೊಂದು ವಚನದಲ್ಲಿ "ಬಸವಣ್ಣನ ಭಕ್ತಿಸ್ಥಲ,

ಮಡಿವಾಳ ಮಾಚಣ್ಣನ ಮಹೇಶ್ವರಸ್ಥಲ, ಘಟ್ಟಿವಾಳ ಮುದ್ದಣ್ಣನ ಪ್ರಸಾದಿ ಸ್ಥಲ, ಚೆನ್ನಬಸವಣ್ಣನ ಪ್ರಾಣಲಿಂಗಿಸ್ಥಲ, ಪ್ರಭುವಿನ ಶರಣಸ್ಥಲ, ಸೊಡ್ಡಳ ಬಾಚರಸರ ಐಕ್ಯಸ್ಥಲ. ಅಜಗಣ್ಣನ ಆರೂಢ, ನಿಜಗುಣನ ನಿಬ್ಬೆರಗು, ಅನಿಮಿಷನ ನಿಶ್ಚಲ, ಮಹಾದೇವಿಯಕ್ಕನ ಜ್ಞಾನ, ನಿಂಬಿಯಕ್ಕನ ನಿಶ್ಚಯ, ಮುಕ್ತಾಯಕ್ಕನ ಅಕ್ಕರ, ಸತ್ಯಕ್ಕನ ಮುಕ್ತಿ, ಅಲ್ಲಾಳಿಆಕ್ಕನ ಸಮತೆ, ರೇವಣಸಿಪ್ಪಯ್ಯದೇವರ ನಿಷ್ಠೆ, ಸಿದ್ಧರಾಮ ತಂದೆಗಳ ಮಹಿಮೆ, ಮರುಳಸಿದ್ಧಯ್ಯದೇವರ ಅದೃಷ್ಟಪ್ರಸಾದನಿಷ್ಠೆ, ಏಕೋರಾಮಯ್ಯಗಳ ಆಚಾರನಿಷ್ಠೆ. ಪಂಡಿತಾರಾಧ್ಯರ ಸ್ವಯಂಪ್ರಕಾಶ, ಮುಗ್ಧಸಂಗಯ್ಯ, ಮೈದುನ ರಾಮಣ್ಣ, ಬೇಡರ ಕಣ್ಣಪ್ಪ. ಕೋಳೂರು ಕೊಡಗೂಸು, ತಿರುನೀಲಕಂಠನಕ್ಕರು, ರುದ್ರಪಶುಪತಿಗಳು, ದೀಪದ ಕಲಿಯಾರು ಇಂತಿವರ ಮುಗ್ಧ ಭಕ್ತಿ ನಿಮ್ಮೊಳಿನಗೆಂದಪ್ಪುದೋ ಸೌರಾಷ್ಟ್ರಸೋಮೇಶ್ವರಾ ॥೨೨೭॥

ಬಸವಣ್ಣನವರ ನಂತರ ಸ್ವಲ್ಪ ಕಾಲದಲ್ಲಿಯೇ ಪ್ರಸಿದ್ಧಿಗೆ ಬಂದ ಮತ್ತು "ಬಸವರಾಜದೇವರ ರಗಳೆ"ಯನ್ನು ರಚಿಸಿದ ಮಹಾಕವಿ ಹರಿಹರನು ಶ್ರೀ ಜಗದ್ಗುರು ರೇವಣಸಿದ್ಧರ ಬಗ್ಗೆ ತನ್ನ "ರೇವಣಸಿದ್ಧೇಶ್ವರದೇವರ ರಗಳೆ" ಎಂಬ ಕಾವ್ಯ ಗ್ರಂಥದಲ್ಲಿ ಈ ಕೆಳಗಿನಂತೆ ಸ್ಪಷ್ಟಪಡಿಸಿದ್ದಾನೆ:—

"ಸಲೆ ಲಿಂಗದೊಳಗಣಿಂ ಪೂರ್ಣಮೃತ್ತುವಿನಲಂತೆ
ಪುಟ್ಟುತಿರ್ದಂ ಸಿದ್ಧರೇಣುಕಯ್ಯಂ ನೋಡ
ನಿಷ್ಠೆಯಿಗೆ ಸಿದ್ಧರೇವಣ ನಾಮದಿಂ ನೋಡ
... ... .... .... ... .... ... .... .... .... .... ... ....
ಸದಮಳವೆನಿಪ್ಪ ಶಿವಲಿಂಗದೋಳ್ ಪುಟ್ಟಿದಂ (ಪುಟ ೩)

ಇದೇ ಪ್ರಕಾರ ಚೆನ್ನಬಸವಣ್ಣನವರ ತಾಯಿಯಾದ ಅಕ್ಕನಾಗಮ್ಮನೂ ಸಹ ತನ್ನ ವಚನದಲ್ಲಿ:—

"ಲಿಂಗದಿಂದುದಯವಾದಾತ ರೇವಣಸಿದ್ಧಯ್ಯ" ಎಂದು ಹೇಳಿರುವುದರಿಂದ ಲಿಂಗೋದ್ಭವರಾದ ಈ ಜಗದಾಚಾರ್ಯ ರೇವಣಸಿದ್ಧರು ಬಸವೇಶ್ವರನ ಕಾಲದಲ್ಲಿದ್ದ ಅಪ್ಪರೇವಣ್ಣಗಳಿಗಿಂತ ಮೊದಲಿನವರೆನ್ನುವುದು ಸ್ಫುಟವಾಗಿ ವ್ಯಕ್ತವಾಗುತ್ತದೆ.

ಹೀಗೆ ಇನ್ನೂ ಅನೇಕ ವಚನಕಾರರು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರನ್ನು ಹೊಗಳಿದ್ದಾರೆ. ಇತ್ತಲಾಗಿ ಸುಪ್ರಸಿದ್ಧರಾದ ತೋಂಟದ ಸಿದ್ಧಲಿಂಗಶಿವಯೋಗಿಗಳು ತಮ್ಮ ವಚನವೊಂದರಲ್ಲಿ "ಆದಿಯಲ್ಲಿ ಶಿವತತ್ವ ವಲ್ಲಿ ರೇಣುಕನುದಯನಾಗದಿರ್ದೊಡೆ ಇಲ್ಲಿ ಶಿವಲಿಂಗದಲ್ಲಿ ಉದಯ ನಾದ ಪರಿಯಂತೋ? ಆ ಶಿವನಲ್ಲಿಯೇ ಹುಟ್ಟಿ ಶಿವನಲ್ಲಿಯೇ ಲಯವಾದ ರೇವಣಸಿದ್ಧೇಶ್ವರನು ಅನಾದಿಮುಕ್ತನಲ್ಲ; ಅವಾಂತರ ಮುಕ್ತನೆಂಬ ಅಜ್ಞಾನಿಗಳಿಗೆ ನಾಯಕ ನರಕ ತಪ್ಪದು........ ........ಮಹಾಲಿಂಗ ಗುರು ಶಿವಸಿದ್ಧೇಶ್ವರ ಪ್ರಭುವೇ."

(ಡಾ॥ ಶ್ರೀ ಆರ್. ಸಿ. ಹಿರೇಮಠ ಅವರು ಸಂಪಾದಿಸಿದ ಷಟ್‌ಸ್ಥಲಸಾರಾಮೃತ)

ಇದೇಪ್ರಕಾರ ತೋಂಟದ ಸಿದ್ಧಲಿಂಗಶಿವಯೋಗಿಗಳ ಶಿಷ್ಯರಾದ ವಿರಕ್ತ ಮರಿತೋಂಟದಾರ್ಯರೂ ಸಹ "ವೀರಶೈವಾನಂದಚಂದ್ರಿಕೆ" ಎಂಬ ಗ್ರಂಥದಲ್ಲಿ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರನ್ನು ಅಪಾರವಾದ ಭಕ್ತಿಯಿಂದ ಕೊಂಡಾಡಿದ್ದಾರೆ.

ವಚನವಾಙ್ಮಯಸಂಶೋಧಕ ಪಿತಾಮಹರೆಂದು ಪ್ರಸಿದ್ಧಿ ಹೊಂದಿದ್ದ ವಿಜಾಪುರದ ಕೈ॥ ಫ. ಗು. ಹಳಕಟ್ಟಿ ಅವರು "ಶಿವಶರಣರ ಚರಿತ್ರೆಗಳು" ಭಾಗ ೩ ರಲ್ಲಿ, ರೇಣುಕ, ರೇವಣಸಿದ್ಧಾದಿಗಳು ಐತಿಹಾಸಿಕ ವ್ಯಕ್ತಿಗಳಾಗಿದ್ದರೆಂಬುದನ್ನು ಸ್ಪಷ್ಟಮಾಡಿದ್ದಾರೆ. ಪಂಚಾಚಾರ್ಯರು ಐತಿಹಾಸಿಕವ್ಯಕ್ತಿಗಳಲ್ಲವೆಂದು ಬಡಬಡಿಸುವವರು ಇವರ ಲೇಖನವನ್ನು ಚೆನ್ನಾಗಿ ಓದಿಕೊಂಡು ಇನ್ನಾದರೂ ತಮ್ಮ ದುರ್ವಾದವನ್ನು ತ್ಯಾಗಮಾಡಲಿ! ಶ್ರೀ ಹಳಕಟ್ಟಿಯವರ ಲೇಖನದ ಮುಖ್ಯಾಂಶವನ್ನು ಇಲ್ಲಿ ಕೊಟ್ಟಿರುತ್ತೇವೆ.

"ರೇಣುಕರು:- ಸಿಂಹಲದ್ವೀಪವು ಹಿಂದುಸ್ಥಾನಕ್ಕೆ ತೀರ ಸಮೀಪವರ್ತಿಯಾದ ದೇಶವು. ಈಗ ಇಲ್ಲಿ ಬೌದ್ಧಧರ್ಮವು ಅಸ್ತಿತ್ವದಲ್ಲಿದೆ, ಆದರೂ ಒಂದುಕಾಲದಲ್ಲಿ ಅಲ್ಲಿ ಶೈವಮತವು ಪ್ರಾದುರ್ಭವಿಸಿತ್ತೆಂದು ತಿಳಿದುಬರುತ್ತದೆ. ರಾವಣನು ಶಿವಮತಕ್ಕೆ ಹೊಂದಿದವನು, ಅವನಮೂಲಕವೇ ಗೋಕರ್ಣ ಕ್ಷೇತ್ರದಲ್ಲಿ ಶಿವಲಿಂಗವು ಸ್ಥಾಪಿತವಾದುದು. ಮುಂದೆ ವಿಭೀಷಣನು ಅವನ

ತರುವಾಯ ರಾಜ್ಯವಾಳಹತ್ತಿದನು, ಅವನ ಕಾಲಕ್ಕೆ ಸಿಂಹಳ ದ್ವೀಪದಲ್ಲಿ ಶೈವಮತವು ಮತ್ತಿಷ್ಟು ದೃಢಪಟ್ಟಿತು. ಇದು ಕರ್ನಾಟಕದೇಶದಲ್ಲಿ ಅತ್ಯಂತ ಪ್ರಸಿದ್ಧಿಯನ್ನು ಹೊಂದಿದ ರೇಣುಕನ ಮೂಲಕವೇ ಆಯಿತೆಂದು ರೇಣುಕನಚರಿತ್ರೆಯಿಂದ ತಿಳಿದು ಬರುತ್ತದೆ. ಈ ಮಹಾನುಭಾವನ ಚರಿತ್ರೆಯನ್ನು ವಿವರಿಸುವ ಅನೇಕ ಗ್ರಂಥಗಳು ವೀರಶೈವ ವಾಙ್ಮಯದಲ್ಲಿ ಉಪಲಬ್ಧವಿವೆ. ಅವುಗಳಿಂದ ಕೆಳಗೆಕಾಣಿಸಿದ ಸಂಗತಿಗಳು ತಿಳಿದು ಬರುತ್ತಿವೆ.

ರೇಣುಕನ ಜನ್ಮಸ್ಥಾನವು ಆಂಧ್ರ ಮತ್ತು ಕರ್ನಾಟಕ ದೇಶಗಳ ಗಡಿಯಲ್ಲಿರುವ ಕೊಲ್ಲಿಪಾಕಿ ಅಥವಾ ಕೊಲನುಪಾಕಿ ಎಂಬುದಾಗಿದ್ದು ಇಲ್ಲಿ ಸೋಮೇಶ್ವರಲಿಂಗದ ಮಹತ್ವದ ದೇವಾಲಯವಿದೆ, ಅದರಲ್ಲಿಯ ಲಿಂಗದಲ್ಲಿ ರೇಣುಕನು ಪ್ರಾದುರ್ಭವಿಸಿದನು. ಮುಂದೆ ಅವನು ಕರ್ನಾಟಕದೇಶಕ್ಕೆ ಬಂದು ಇಲ್ಲಿದ್ದ ಮಲಯಪರ್ವತದಲ್ಲಿ ವಾಸಿಸುವವನಾದನು. ಈಗ ಮೈಸೂರು ಸಂಸ್ಥಾನದಲ್ಲಿರುವ ಬಾಳೇಹಳ್ಳಿಯು ಇದೇ ಪ್ರದೇಶದಲ್ಲಿರುತ್ತದೆ, ಇಲ್ಲಿ ಅಗಸ್ತ್ಯಮಹಾಮುನಿಯು ಅನೇಕ ತಪಸ್ವಿಗಳೊಡನೆ ವಾಸಿಸುವವನಾಗಿದ್ದನು. ರೇಣುಕನು ಇಲ್ಲಿ ಇದ್ದಾಗ್ಗೆ ಅವನು ಅಗಸ್ತ್ಯಮುನಿಗೆ ಷಟ್‌ಸ್ಥಲ ಜ್ಞಾನವನ್ನುಂಟುಮಾಡಿಕೊಟ್ಟು ಅವನಿಗೆ ಲಿಂಗದೀಕ್ಷೆಯನ್ನಿತ್ತನು.

ರೇಣುಕನ ತರುವಾಯ ೧೪೦೦ ವರ್ಷಗಳಮೇಲೆ ರೇವಣಸಿದ್ಧೇಶ್ವರನು ಬಿಜ್ಜಳನ ಕಾಲದಲ್ಲಿ ಪ್ರಸಿದ್ಧಿಗೆ ಬಂದನು. ಈ ಮಹಾಪುರುಷನು ಮಾಡಿದ ಧರ್ಮೋದ್ಧಾರಕಾರ್ಯಗಳು ರೇಣುಕನು ನಡೆಸಿದ ಕಾರ್ಯಗಳಿಗೆ ಬಹಳ ಹೋಲುವುದರಿಂದಲೂ ಅವರಿದ್ದ ಅನೇಕ ಸ್ಥಳಗಳು ಕೂಡ ಒಂದೇ ಇರುವುದರಿಂದಲೂ ರೇಣುಕನೇ ೧೪೦೦ ವರ್ಷಗಳ ತರುವಾಯ ರೇವಣಸಿದ್ಧೇಶ್ವರನೆಂಬ ಹೆಸರಿನಿಂದ ಪ್ರಾದುರ್ಭವಿಸಿದನೆಂದು ವೀರಶೈವ ಗ್ರಂಥಗಳಲ್ಲಿ ಉಲ್ಲೇಖಗಳಿರುತ್ತವೆ, ಆದರೆ ಐತಿಹಾಸಿಕದೃಷ್ಟಿಯಿಂದ ವಿಚಾರಮಾಡಲಾಗಿ ರೇಣುಕನು ಪುರಾತನಕಾಲದಲ್ಲಿ ಅಗಸ್ತ್ಯನಂತೆ ಶಿವಮತವನ್ನು ಹಿಂದೂಸ್ಥಾನದಲ್ಲಿಯೂ ನೆರೆದೇಶ

ವಾದ ಸಿಂಹಳ ದ್ವೀಪದಲ್ಲಿಯೂ ಪ್ರಸ್ಥಾಪಿಸಿದನೆಂದು ತಿಳಿಯಲು ಯಾವ ಪ್ರತ್ಯವಾಯವೂ ತೋರುವದಿಲ್ಲ."

ಹೀಗೆ ಶರಣಸಾಹಿತ್ಯವನ್ನು ಸಮಗ್ರವಾಗಿ ಅಭ್ಯಾಸಮಾಡಿದ ಶ್ರೀ ಫ. ಗು. ಹಳಕಟ್ಟಿಯುವರೇ ಶ್ರೀ ರೇಣುಕರು ಶಿವಮತವನ್ನು ಪ್ರಸ್ಥಾಪಿಸಿದ ರೆಂದೂ, ಷಟ್‌ಸ್ಥಲ ಸಿದ್ಧಾಂತವನ್ನು ಬೋಧಿಸಿದರೆಂದೂ ಸ್ಪಷ್ಟ ಪಡಿಸಿರುವಾಗ. ಶ್ರೀ ಪಾಳೆಣ್ಣೆಯುವರು "ಶ್ರೀ ರೇವಣಸಿದ್ಧಾದಿಗಳು ಬಸ ವಣ್ಣ. ಚೆನ್ನಬಸವಣ್ಣ. ಅಲ್ಲಮಪ್ರಭು, ಅಕ್ಕಮಹಾದೇವಿ ಇವರುಗಳ ಎತ್ತರಕ್ಕೆ ಹೋಗಲಿಲ್ಲ" ಎಂದು ಟೀಕಿಸಿರುವುದು ತಮ್ಮ ದುರ್ಬುದ್ಧಿಯ ದ್ಯೋತಕ, ಮತ್ತು ಅನಭ್ಯಾಸದ ಪ್ರತೀಕವೆಂದು ಸ್ಪಷ್ಟವಾಗುವುದು.

ಮೇಲ್ಕಾಣಿಸಿದ ಈ ಎಲ್ಲ ಆಧಾರಗಳಿಂದ ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರು ಬಸವೇಶ್ವರನಿಗಿಂತ ಮೊದಲೇ ವಿಖ್ಯಾತರಾಗಿದ್ದುದು ಸ್ಪಷ್ಟ ವಾಗುತ್ತದೆ. ಆದುದರಿಂದ ಅವರು ಸ್ಥಾಪಿಸಿದ ವೀರಶೈವಮತವು ಬಸವೇಶ್ವರ ನಿಗಿಂತ ಹಿಂದೆಯೇ ಬಹಳ ಪ್ರಚಾರದಲ್ಲಿತ್ತೆನ್ನುವಲ್ಲಿ ಸಂದೇಹವೇ ಇಲ್ಲ.

ಕ್ರಿಸ್ತಶಕ ೧೧೧೨ ರಲ್ಲಿ ಹುಟ್ಟಿದ ಬಳ್ಳಿಗಾವಿಯ ೮ ನೇ ಶಿಲಾಲೇಖನ ದಲ್ಲಿ ಹಿರೀಮಠ, ಪಂಚಲಿಂಗನಮಠ, ತ್ರಿಪುರಾಂತಕನಮಠ. ವಾಮ ಶಕ್ತಿಮಠ, ಕೋಡಿಯಮಠ, ಎಂಬ ಐದು ಮಠಗಳಿದ್ದಂತೆಯೂ, ಆ ಮಠ ಗಳಲ್ಲಿ ಮಧುಕೇಶ್ವರ ಪಂಡಿತ, ಸರ್ವೇಶ್ವರ ಪಂಡಿತದೇವ, ಜ್ಞಾನಶಕ್ತಿದೇವ ಮೊದಲಾದ ಮಠಾಧಿಕಾರಿಗಳಿದ್ದಂತೆಯೂ, ಈ ಬಳ್ಳಿಗಾವಿಯಲ್ಲಿ ಮಾಚಿಶೆಟ್ಟಿ, ಮಾಣಿಕಶೆಟ್ಟಿ, ಮಹಾದೇವಶೆಟ್ಟಿ ಮೊದಲಾದ ವೀರಬಣಜಿಗರು ಇದ್ದರೆಂ ತಲೂ; ೧೦ ನೇ ಶಿಲಾಲೇಖವಲ್ಲಿ ಈ ಶೆಟ್ಟರು ನೇಪಾಳ, ಕುರುಂಬ, ಕಾಂ ಬೋಜ, ಗೌಲ್ಲ, ಲಾಳ, ಬರ್ಬರ ಮೊದಲಾದ ದೇಶಗಳಿಗೆ ಜಲ-ಸ್ಥಲ ಮಾರ್ಗ ಗಳಿಂದ ವ್ಯಾಪಾರಕ್ಕೋಸ್ಕರ ಹೋಗುತ್ತಿದ್ದರೆಂತಲೂ. ಇವರು ಶಿವಲಿಂಗ ವನ್ನು ಮಸ್ತಕದಲ್ಲಿ ಧರಿಸುತ್ತಿದ್ದರಲ್ಲದೆ; ಕೈಲಾಸ ನಿಶಾನೆ, ಬಿಳೇಕೊಡೆ ಗಳನ್ನು ಉಪಯೋಗಿಸುತ್ತಿದ್ದರೆಂತಲೂ; ಈ ವೀರಬಣಜಿಗರು ವೀರಶೈವ ರಲ್ಲಿಯ ಒಂದು ವರ್ಗಕ್ಕೆ ಸೇರಿದವರೆಂತಲೂ ಬಿ. ರೈಸ್‌ಸಾಹೇಬರವರು "ಮೈಸೂರು ಇನ್‌ಸ್ಕ್ರಿಪ್ಶನ್ಸ್" ನಲ್ಲಿ ಪ್ರಕಟಿಸಿದ್ದಾರೆ.

ಕ್ರಿಸ್ತಶಕ ೯ನೇ ಶತಮಾನದಲ್ಲಿ ಕಂಚಿ ಪಟ್ಟಣದಲ್ಲಿ ಅಕಳಂಕ ಎಂಬ ಜೈನ ಗುರುಗಳು ವೀರಶೈವರ ಪಕ್ಷವನ್ನು ವಹಿಸಿ ಬೌದ್ಧರ ಸಂಗಡ ವಾದಿಸಿದರೆಂದು ಕ್ರಿಸ್ತಶಕ ೧೧೨೫ ರಲ್ಲಿ ಬರೆದ ಶ್ರವಣಬೆಳಗೊಳದ ಶಿಲಾಲೇಖದಿಂದ ಗೊತ್ತಾಗುತ್ತದೆ. ಇದರಿಂದ ೯ನೆಯ ಶತಮಾನದಲ್ಲಿಯೂ ವೀರಶೈವ ಮತವು ಉಚ್ಛ್ರಾಯಸ್ಥಿತಿಯಲ್ಲಿತ್ತೆಂದು ಗೊತ್ತಾಗುತ್ತದೆ.

ಮಿ. ರೈಸ್ ಸಾಹೇಬರು "ಮೈಸೂರು ಇನ್‌ಸ್ಕ್ರಿಪ್ಶನ್ಸ್"ನಲ್ಲಿ (ಪುಟ ೨೧೦) ಕೆಳಗಿನಂತೆ ಬರೆದಿದ್ದಾರೆ:—

"ಗಂಗ ವಂಶದಲ್ಲಿನ ವೀರಪ್ಪ ಎಂಬ ರಾಜನು ಕ್ರಿಸ್ತಶಕ ೮೫೦ ರಲ್ಲಿ ರಾಜ್ಯವಾಳುತ್ತಿದ್ದಾಗ ಆ ಕಾಲದ ಶಿಲಾಲಿಪಿಗಳಲ್ಲಿ ವೀರಶೈವ ಯೋಧರ ಗುರುತುಗಳನ್ನು ತೋರಿಸತಕ್ಕ ಚಿತ್ರಗಳಿವೆ" ಎಂದಿದ್ದಾರೆ.

ಮಿ. ಫಿಲಿಪ್‌ಬ್ರೌನ್ ಸಾಹೇಬರು "ಕರ್ಣಾಟಕಾ ಕ್ರಾನಾಲಾಜಿ" ಎಂಬ ಪುಸ್ತಕದ ೪೧ನೇ ಪುಟದಲ್ಲಿ ಈ ಕೆಳಗಿನಂತೆ ಬರೆದಿದ್ದಾರೆ. "ಕ್ರಿಸ್ತಶಕ ೫ನೇ ಶತಮಾನದಲ್ಲಿ ರಾಜ್ಯವಾಳುತ್ತಿದ್ದ ೨೧ನೇ ರಾಜನು ವೀರಶೈವರ ಪಕ್ಷಪಾತಿಯಾಗಿದ್ದನು." ಎಂದಿದ್ದಾರೆ.

ಕ್ರಿಸ್ತಶಕ ೬ನೇ ಶತಮಾನದಲ್ಲಿ ಕಾಶಿಯಲ್ಲಿ ರಾಜ್ಯವಾಳುತ್ತಿದ್ದ ಜಯನಂದದೇವನು ಅಲ್ಲಿರತಕ್ಕ ಶ್ರೀ ವಿಶ್ವಾರಾಧ್ಯಸಿಂಹಾಸನಕ್ಕೆ ಜಂಗಮಪುರವನ್ನು ಉಂಬಳಿಯಾಗಿ ಕೊಟ್ಟಿದ್ದನೆಂದು ತಾಮ್ರಶಾಸನವೊಂದರಿಂದ ಗೊತ್ತಾಗುತ್ತದೆ.

ಆನಂದಗಿರಿ ಎಂಬ ಪಂಡಿತನು 'ಶಂಕರದಿಗ್ವಿಜಯ' ಎಂಬ ಗ್ರಂಥದಲ್ಲಿ "ಆದಿಶಂಕರಾಚಾರ್ಯರು ಜಂಗಮರ ಸಂಗಡ ವಾದಿಸಿದರೆಂತಲೂ, ಜಂಗಮರು ತಲೆಗೆ ಲಿಂಗವನ್ನು ಧರಿಸಿದ್ದರೆಂತಲೂ" ಬರೆದಿದ್ದಾನೆ.

ತಮಿಳುದೇಶದ ಮಹಿಮರಾದ ಮಾಣಿಕ್ಯವಾಚಿಕರ್ ಎಂಬುವರು 'ತಿರುವಾಚಗಂ' ಎಂಬ ಗ್ರಂಥವನ್ನು ಬರೆದು ಪ್ರಸಿದ್ಧರಾಗಿದ್ದಾರೆ. ಇವರು ಕ್ರಿಸ್ತಶಕ ೩ನೇ ಶತಮಾನದಲ್ಲಿದ್ದ ವೀರಶೈವರೆಂದು ಶ್ರೀ ಆರ್. ಎಸ್

ವೇದಾಚಲಂ ಎಂಬುವರು "ತಮಿಲಿಯನ್ ಎಂಟಿಕ್ವೆರಿ" ಎಂಬ ಗ್ರಂಥದಲ್ಲಿ ಬರೆದಿರುತ್ತಾರೆ.

ಕ್ರಿಸ್ತಶಕ ೧ನೇ ಶತಮಾನದಲ್ಲಿ ನಕ್ಕೀರರ್ ಎಂಬ ಪ್ರಸಿದ್ಧ ತಮಿಳು ಕವಿಗಳು ಕೂಡ ವೀರಶೈವರಿದ್ದರೆಂದು ಸದರೀ ಶ್ರೀ ವೇದಾಚಲಂ ಪಂಡಿತರೇ ಸ್ಪಷ್ಟಪಡಿಸಿರುತ್ತಾರೆ.

ಕ್ರಿಸ್ತಪೂರ್ವ ೩ನೇ ಶತಮಾನದಲ್ಲಿ ಸುಪ್ರಸಿದ್ಧರಾದ ತಿರುವಳ್ಳುವರ್ ಎಂಬ ಮಹಿಮರು 'ತಿರುಕುರಳ್' ಎಂಬ ಗ್ರಂಥವನ್ನು ತಮಿಳು ಭಾಷೆಯಲ್ಲಿ ಬರೆದಿರುತ್ತಾರೆ. ವೇಡಿವೇಲು ಪಿಳ್ಳೈ ಎಂಬ ವಿದ್ವಾಂಸರು ಈ ಗ್ರಂಥಕ್ಕೆ ಭಾಷ್ಯೆಯನ್ನು ಬರೆದು ತಿರುವಳ್ಳುವರ್ ವೀರಶೈವರಿದ್ದರೆಂದು ಸ್ಪಷ್ಟಪಡಿಸಿದ್ದಾರೆ.

ಇವೆಲ್ಲ ಶಿಲಾಲೇಖಗಳ ಮತ್ತು ಇತಿಹಾಸಗ್ರಂಥಗಳ ಆಧಾರದಿಂದ ವೀರಶೈವಮತವು ಕ್ರಿಸ್ತಪೂರ್ವದಲ್ಲಿಯೇ ಪ್ರಬಲವಾಗಿಯೂ ವ್ಯಾಪಕವಾಗಿಯೂ ಇದ್ದಿತೆಂದು ಸ್ಪಷ್ಟವಾಗುವುದು.

ಶ್ರೀ ಜಗದ್ಗುರು ಪಂಚಾಚಾರ್ಯರ ಶಾಖೆಗೆ ಸೇರಿದ ಹಿರೇಮಠ ತ್ರಿಪುರಾಂತಕನಮಠ ಮುಂತಾದವುಗಳೇ ಕ್ರಿಸ್ತಶಕ ೧೧ನೇ ಶತಮಾನದಲ್ಲಿಯೇ ಸುಪ್ರಸಿದ್ಧವಾಗಿದ್ದಾಗ್ಗ, ಮೂಲ ಗುರುಪೀಠಗಳಾದ ಪಂಚ ಜಗದ್ಗುರುಪೀಠಗಳು ಅದಕ್ಕಿಂತ ಎಷ್ಟೋ ಪ್ರಾಚೀನಕಾಲದಲ್ಲಿ ಸುಪ್ರಸಿದ್ಧವಾಗಿದ್ದವೆಂಬುದು ನಿರ್ವಿವಾದವಾಗಿದೆ.

ಶರಣಸಾಹಿತ್ಯ ನಿಪುಣರಾಗಿ ದೇಶಭಕ್ತರಾಗಿ ಪ್ರಸಿದ್ಧರಾಗಿದ್ದ ಕೈ॥ ಶ್ರೀ ಹರ್ಡೇಕರ ಮಂಜಪ್ಪನವರು ತಾವು ರಚಿಸಿದ "ಬಸವಚರಿತ್ರೆ"ಯಲ್ಲಿ ಈ ಕೆಳಗಿನಂತೆ ಬರೆದಿರುತ್ತಾರೆ:- "ಶ್ರೀ ಬಸವಣ್ಣನವರು ಬಿಜ್ಜಳರಾಜನ ಸಚಿವ ಶಿರೋಮಣಿಗಳಾದ ಬಳಿಕ ಯಾವ ವೀರಶೈವಮತೋದ್ಧಾರಕ್ಕೋಸ್ಕರವಾಗಿಯೇ ತಮ್ಮ ಸರ್ವಸ್ವವನ್ನೂ ಸಮರ್ಪಿಸಿದರೋ ಆ ವೀರಶೈವಮತವು ವೇದಾಗಮೋಪನಿಷತ್ತುಗಳಲ್ಲಿ ಪ್ರತಿಪಾದಿಸಲ್ಪಟ್ಟುದಾಗಿಯೂ, ಶ್ರೀ ನೀಲಕಂಠಶಿವಾಚಾರ್ಯ, ಶ್ರೀ ರೇಣುಕಾಚಾರ್ಯ ಮೊದ

ಲಾದ ಮಹಾಮಹಾ ಜ್ಞಾನಿಗಳಿಂದ ಬೋಧಿಸಲ್ಪಟ್ಟದ್ದಾಗಿಯೂ, ಮಾಣಿಕ್ಯವಾಚಿಕರ್, ದೇವರದಾಸಿಮಯ್ಯ ಮೊದಲಾದ ಅಸಂಖ್ಯ ಮಹಿಮಾಶಾಲಿಗಳಿಂದ ಆಚರಿಸಲ್ಪಟ್ಟದ್ದಾಗಿಯೂ ಇಷ್ಟೇ ಅಲ್ಲ; ಭಾರತೀಯ ತತ್ವಜ್ಞಾನದಲ್ಲಿ ಒಂದು ವಿಶೇಷತರವಾದ ವೈಶಿಷ್ಟತೆಯನ್ನು ಹೊಂದಿರುವುದಾಗಿ ಇರುವುದರಿಂದಲೇ ಮಹಾನುಭಾವರಾದ ಬಸವಣ್ಣನವರು ಈ ಮತ ಸೇವೆಯೇ ತಮ್ಮ ಜೀವಿತವೆಂದು ಭಾವಿಸಿದರು" ಎಂದು ಸ್ಪಷ್ಟಪಡಿಸಿದ್ದಾರೆ.

ದೇವರದಾಸಿಮಯ್ಯನು ಕ್ರಿಸ್ತಶಕ ೯೪೦ ರಲ್ಲಿ ಚಾಲುಕ್ಯರ ೩ನೇ ಜಯಸಿಂಹನ ಕಾಲದಲ್ಲಿ ಇದ್ದಂತೆಯೂ, ಈ ಜಯಸಿಂಹನ ಪತ್ನಿಯಾದ ಸುಗ್ಗಲದೇವಿಗೆ ಈ ದೇವರದಾಸಿಮಯ್ಯನು ವೀರಶೈವಮತಬೋಧೆಯನ್ನು ಮಾಡಿದಂತೆಯೂ ಬಸವಪುರಾಣದಿಂದ ಗೊತ್ತಾಗುತ್ತದೆ.

ಇವೇ ಮೊದಲಾದ ಆಧಾರಗಳಿಂದ ಬಸವೇಶ್ವರನ ಕಾಲಕ್ಕಿಂತ ಹಿಂದೆಯೇ ವೀರಶೈವಮತವು ಉಚ್ಛ್ರಾಯ ಸ್ಥಿತಿಯಲ್ಲಿದ್ದುದು ಸ್ಪಷ್ಟವಾಗಿ ಕಂಡುಬರುತ್ತದೆ.

(೩) ನೆಯ ಆಕ್ಷೇಪ:—

**ಬಸವಣ್ಣನವರು ಇಂತಹ ಒಂದು ಪರಂಪರೆಯ ವ್ಯಕ್ತಿಯಿಂದ ಉಪದೇಶ ಹೊಂದಿದರೆಂಬುದು ಸತ್ಯಕ್ಕೆ ದೂರವಾಗಿದೆ.**

ಇದಕ್ಕೆ ನಮ್ಮ ಉತ್ತರ:—

## ಬಸವಣ್ಣನವರು ಶ್ರೀಜಗದ್ಗುರು ಪಂಚಾಚಾರ್ಯರ ಪರಂಪರೆಯ ಜಾತವೇದ ಮುನಿಗಳಿಂದಲೇ ಶಿವದೀಕ್ಷಾಸಂಪನ್ನರಾದರು

ಸಿಂಗಿರಾಜನ "ಅಮಲಬಸವಚಾರಿತ್ರ್ಯಕಾವ್ಯ"ವನ್ನು ತರಿಸಿಕೊಂಡು ಚೆನ್ನಾಗಿ ಅಭ್ಯಾಸ ಮಾಡಿದರೆ ಈ ಪ್ರಶ್ನೆಗೆ ಉತ್ತರ ತಾನೇದೋರುತ್ತದೆ. "ಪೂರ್ವಾಚಾರ್ಯರು ಎಮಗಾಚಾರ್ಯರು" ಎಂಬ ಬಸವಣ್ಣನವರ

ಘಾತಿನಿಂದ ಅವರಿಗಿಂತ ಪೂರ್ವದ ಆಚಾರ್ಯರು ರೇಣುಕಾದಿ ಪಂಚಾಚಾರ್ಯರೆಂದು ಅರ್ಥವಾಗುತ್ತದೆ. "**ಶಿವಾಗಮಾಚಾರದ ಪೂರ್ವಾಚಾರ್ಯರು ಮತ್ತು ಆದಿಗುರುಗಳು ಜಾತವೇದಿಗುರುಗಳು**" ಎಂದು ಬಸವಣ್ಣನವರು ಹೇಳಿದ ಈ ನುಡಿಗಳಿಂದ ಶಿವಾಗಮಾಚಾರದ ಪೂರ್ವಾಚಾರ್ಯರು ಶ್ರೀ ಜಗದ್ಗುರು ರೇಣುಕಾದಿ ಪಂಚಾಚಾರ್ಯರೇ ಆಗುತ್ತಾರೆ, ಆದಿಗುರುಗಳಾದ ಜಾತವೇದಿಗಳು ಉಪಾಚಾರ್ಯರಾಗುತ್ತಾರೆಂಬುದು ಸ್ಪಷ್ಟವಾಗಿಯೇ ಇದೆ,

ಕೈ॥ ಶ್ರೀಮಾನ್ ಹರ್ಡೇಕರ್ ಮಂಜಪ್ಪನವರು ತಮ್ಮ "ಬಸವಚರಿತ್ರೆ" ಯಲ್ಲಿ ಈ ಕೆಳಗಿನಂತೆ ಬರೆದಿರುತ್ತಾರೆ:—

"ಜಾತವೇದಿಮುನಿಗಳು ಸಂಗಮೇಶನಿಗೂ ತಮಗೂ ಅಭಿನ್ನಭಾವನೆಯುಳ್ಳವರಾಗಿದ್ದುದನ್ನು ನೋಡಿ ಜನಗಳು ಇವರು ಸಾಕ್ಷಾತ್ ಸಂಗಮನಾಥನೆಂದೇ ನಂಬಿದುದರಲ್ಲಿ ಆಶ್ಚರ್ಯವೇನು? ಆದಕಾರಣ ಬಸವಪುರಾಣಾದಿ ಅನೇಕ ಗ್ರಂಥಗಳಲ್ಲಿ ಸಂಗಮನಾಥನೇ ಬಸವನಿಗೆ **ಲಿಂಗಧಾರಣ ಮಾಡಿದನೆಂದು ಹೇಳಲ್ಪಟ್ಟಿದೆ.**"

"ಜಾತವೇದಿಮುನಿಗಳು ಪರಮ ವೀರಶೈವರಾಗಿಯೂ, ಮಹಾಜ್ಞಾನಿಗಳಾಗಿಯೂ ಇದ್ದರು, ಆದುದರಿಂದಲೇ ಈ ಶಿಶುವು ಧರ್ಮಮೂರ್ತಿಯೆಂದು ತಿಳಿದು ಕ್ಷೀಣಿಸಿಹೋಗಿದ್ದ ಆ ವೀರಶೈವ ಮತವನ್ನು ಈತನಿಂದಲೇ ಉದ್ಧಾರಗೊಳಿಸಬೇಕೆಂದು ನಿರ್ಧರಿಸಿ ಆ **ಕೂಸಿಗೆ ವೀರಶೈವಮತ ದೀಕ್ಷೆಯನ್ನು ಮಾಡಿದರು**"

"ಹಾಗೆಯೇ ಜಾತವೇದಿಮುನಿಗಳು ಕೂಡ ಶ್ರೀಮದ್ಬಸವನ ದಿವ್ಯತರವಾದ ಭವಿಷ್ಯಸ್ಥಿತಿಯನ್ನರಿತವರಾಗಿ ಆತನಿಗೆ **ವೀರಶೈವದೀಕ್ಷೆಯನ್ನು ಮಾಡಿ** ತಮ್ಮಾಶ್ರಮಕ್ಕೆ ಹೊರಟು ಹೋದರು,"

"ಬಸವದೇವನ ಶ್ರೇಯಸ್ಸೇ ತಮ್ಮ ಹಿತಾರ್ಥವೆಂದು ಭಾವಿಸಿದ್ದ ಆತನ **ಪರಮಗುರುಗಳು ಜಾತವೇದಿಮುನಿಗಳು** ನಾನಾ ಶಾಸ್ತ್ರಗಳಲ್ಲಿ ಮಹಾಜ್ಞಾನಿಗಳಾಗಿದ್ದರಷ್ಟೆ!"

ಇದರಿಂದಾಗಿ ಸಂಗಮನಾಥನೂ ಜಾತವೇದಿಮುನಿಗಳೂ ಭಿನ್ನವ್ಯಕ್ತಿಗಳಲ್ಲವೆಂದು ಸ್ಪಷ್ಟವಾಗುವುದಲ್ಲದೆ, ಶ್ರೀ ಜಗದ್ಗುರು ರೇಣುಕಾದಿ ಪೂರ್ವಾಚಾರ್ಯಸಾಂಪ್ರದಾಯಿಕರಾದ ಜಾತವೇದಿಮುನಿಗಳೇ ಬಸವಣ್ಣನವರ ಶಿವದೀಕ್ಷಾಗುರುಗಳಾಗಿದ್ದರೆನ್ನುವುದು ಸ್ಪಷ್ಟವಾಗುತ್ತದೆ.

## ಭಕ್ತ—ಮಾಹೇಶ್ವರರ ವಂಶಗಳು ಅನಾದಿಯಿಂದ ಬಂದವುಗಳು

(೪) ನೆಯ ಆಕ್ಷೇಪ:—

**ಶಿವಭಕ್ತರಲ್ಲಿ ಹುಟ್ಟಿನಿಂದ ಮೇಲು ಕೀಳೆಂಬುದು ಬರುವುದಿಲ್ಲ.**

**ಇದಕ್ಕೆ ನಮ್ಮ ಉತ್ತರ:—**

ಮೇಲು ಕೀಳು ಬರುತ್ತದೆಂದು ನಾವು ಗ್ರಂಥದಲ್ಲಿ ಎಲ್ಲಿಯೂ ಬರೆದಿಲ್ಲ. ಆದರೆ ಶಿವಾಗಮಗಳ ಹಾಗೂ ಬಸವಣ್ಣನವರ ಅಭಿಪ್ರಾಯ ಪ್ರಕಾರ ವೀರಶೈವಭಕ್ತನು ಮಾಹೇಶ್ವರ ಅಥವಾ ಜಂಗಮನೆಂಬ ಸ್ವಾಮಿಗೆ ಶಿಷ್ಯನಾಗಿ ನಡೆದುಕೊಳ್ಳಬೇಕಾಗುತ್ತದೆ. ಬಸವಣ್ಣನವರು ತಿಳಿಸುವ ಸ್ವಾಮಿ-ಭೃತ್ಯ ಸಂಬಂಧವು ಇದೇ ಆಗಿದೆ, ಎಂಬುವನ್ನು ಮಾತ್ರ ಸ್ಪಷ್ಟಪಡಿಸಿದ್ದೇವೆ.

(೫) ನೆಯ ಆಕ್ಷೇಪ:—

**ಭಕ್ತ, ಗುರು, ಜಂಗಮ, ಮಾಹೇಶ್ವರ ಇವು ಜಾತಿಸೂಚಕ ಪದಗಳಲ್ಲ.**

**ಇದಕ್ಕೆ ನಮ್ಮ ಉತ್ತರ:—**

ವೀರಶೈವಶಾಸ್ತ್ರದಲ್ಲಿ ಭಕ್ತರವಂಶ, ಮಾಹೇಶ್ವರವಂಶ ಎಂದು ಪ್ರತ್ಯೇಕವಾಗಿ ವರ್ಣನೆ ಇರುವುದರಿಂದ ಇವು ಕುಲಗಳೂ ಅಹುದು, ಜಾತಿಗಳೂ ಅಹುದು, ಎಂಬುವನ್ನು ಇಲ್ಲಿ ಶಾಸ್ತ್ರಾಧಾರ ಮೂಲಕ ಸ್ಪಷ್ಟಪಡಿಸುತ್ತಿದ್ದೇವೆ.

ವೀರಶೈವಸದಾಚಾರಸಂಗ್ರಹದಲ್ಲಿ ಶಿವಾಗಮಶಾಸ್ತ್ರರೀತ್ಯಾ ಭಕ್ತವಂಶ, ಮಾಹೇಶ್ವರವಂಶ ಎಂಬ ಎರಡು ವಂಶಗಳು ಪ್ರತ್ಯೇಕವಾಗಿರು

ವವೆಂಬುದನ್ನು ಈ ಕೆಳಗಿನಂತೆ ನಿರ್ಣಯಿಸಿದ್ದಾರೆ:–

"ಗುರುಸ್ಥಲಸಮಾಖ್ಯಾತಾ ವೀರಮಾಹೇಶ್ವರಾಃ ಶಿವಾಃ।
ಏತೇ ಗುರುಪದಾಧ್ಯಕ್ಷಾ ನಾನ್ಯೇ ಲಾಂಛನಧಾರಿಣಃ॥

(ಪ್ರಕರಣ ೧೪ ಶ್ಲೋ. ೧೦-೧೧)

"ಗುರುಸ್ಥಲದವರೆಂದು ಪ್ರಸಿದ್ಧರಾದ ವೀರಮಾಹೇಶ್ವರರೇ ಗುರುಸ್ಥಾನಕ್ಕೆ ಅಧಿಕಾರಿಗಳು ಉಳಿದವರು ವೇಷಧಾರಿಗಳು." ಎಂದು ಮಾಹೇಶ್ವರರೇ ಗುರುಗಳೆಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಅದೇಪ್ರಕಾರ ಶಿವಭಕ್ತರಿಗೆ ವಂಶಾವಳಿ ಇರುವುದನ್ನೂ. ಲಿಂಗಧಾರಿಗಳಾದ ಅವರಿಗೆ ಶೂದ್ರತ್ವವಿಲ್ಲವೆಂಬುದನ್ನೂ ಈ ಕೆಳಗಿನಂತೆ ಸ್ಪಷ್ಟಪಡಿಸಿದ್ದಾರೆ:—

"ವಂಶಾವಳಿಪ್ರಯಾತಾನಾಂ ಲಿಂಗಧಾರಿಣಶಾಲಿನಾಂ।
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವ ವಿದ್ಯತೆ"॥

(ಪ್ರಕರಣ ೭ ಶ್ಲೋ. ೨೩)

ಎಂಬ ಆಧಾರದಿಂದ ವಂಶಾವಳಿಯನ್ನು ಹಿಡಿದು ಬಂದ ಶಿವಲಿಂಗಧಾರಿ ಶಿವಭಕ್ತರ ವಂಶವೇ ಬೇರೆಯಾಗಿದೆ ಎಂಬುದು ಸ್ಪಷ್ಟವಾಗಿ ತಿಳಿಯುತ್ತದೆ.

ಹೀಗೆ ವಂಶಾನುಗತರಾದ ಮಾಹೇಶ್ವರರಿಗೆ ಮತ್ತು ಭಕ್ತರಿಗೆ ಶಿವದೀಕ್ಷೆಗಳೂ ಕೂಡ ಎರಡು ವಿಧವಾಗಿವೆಯೆಂಬುದನ್ನು ಇಲ್ಲಿ ಸ್ಪಷ್ಟಪಡಿಸಿದ್ದಾರೆ.

"ವೀರಶೈವಾಭಿದಾದೀಕ್ಷಾ ವೀರಮಾಹೇಶ್ವರಾಭಿದಾ।
ಏವಂ ಹಿ ಭಿದ್ಯತೆ ದೀಕ್ಷಾ ಭಕ್ತ–ಮಾಹೇಶ್ವರೇಪಿ ಚ॥

(ಪ್ರಕರಣ ೧೧ ಶ್ಲೋ. ೪೫)

ಭಕ್ತರಿಗೆ ಕೊಡುವ ದೀಕ್ಷೆ ವೀರಶೈವದೀಕ್ಷೆ ಎಂತಲೂ, ಮಾಹೇಶ್ವರರಿಗೆ ಕೊಡುವದೀಕ್ಷೆ ವೀರಮಾಹೇಶ್ವರ ದೀಕ್ಷೆ ಎಂತಲೂ ಎರಡು ದೀಕ್ಷೆಗಳು ಬೇರೆ ಬೇರೆಯಾಗಿದ್ದು. ಇದರಿಂದ ಭಕ್ತಮಾಹೇಶ್ವರ ವಂಶಗಳು ಪ್ರತ್ಯೇಕವಾಗಿರುವುದು ಸ್ಪಷ್ಟವಾಗಿದೆ.

'ಜಂಗಮ' ಎಂದು ವೀರಮಾಹೇಶ್ವರರನ್ನೇ ಕರೆಯಬೇಕು. ಅದು ಅವರಿಗೆ ಪರ್ಯಾಯನಾಮ. ಮತ್ತು ಅವರಿಗೆ ವಿಶಿಷ್ಟವೀರರೆಂತಲೂ ಇನ್ನೊಂದು ಹೆಸರಿದೆ ಎಂಬುದನ್ನು ಈ ಕೆಳಗಿನ ಆಧಾರದಿಂದ ಸ್ಪಷ್ಟ ಪಡಿಸಿದ್ದಾರೆ:—

"ಅತೋ ವಿಶಿಷ್ಟವೀರೇತಿ-ವೀರಮಾಹೇಶ್ವರೇತಿ ಚ।
ಪರ್ಯಾಯೋ ವರ್ತತೇ ದೇವಿ ಜಂಗಮಸ್ಯ ಮಹಾತ್ಮನಃ"॥

(ಪ್ರಕರಣ ೧೧ ಶ್ಲೋ. ೪೫)

ಇಂತಹ ಗುರುಸ್ಥಲದ ಮಾಹೇಶ್ವರರೇ ಪಂಚಗೋತ್ರೋತ್ಪನ್ನರಾಗಿ ಪಂಚಸೂತ್ರಾನುಸಾರಿಗಳಾಗಿ ಎಲ್ಲ ಲಿಂಗಾಂಗಿಗಳಿಗೂ ಗುರುಗಳೆಂದು ನಿರ್ಣಯಿಸಲ್ಪಟ್ಟಿದ್ದಾರೆ, ಎಂಬುದನ್ನು ಈ ಕೆಳಗಿನ ಆಧಾರದಲ್ಲಿ ಸ್ಪಷ್ಟಪಡಿಸಿದ್ದಾರೆ—

"ಪಂಚಗೋತ್ರಸಮುದ್ಭೂತಾಃ ಪಂಚಸೂತ್ರಾನುಸಾರಿಣಃ।
ಗುರುಸ್ಥಲಸಮಾಖ್ಯಾತಾ ಗುರವಸ್ಸರ್ವಲಿಂಗಿನಾಂ।

(ಪ್ರಕರಣ ೧೧ ಶ್ಲೋ. ೪)

ಹೀಗೆ ಮಾಹೇಶ್ವರಾದಿ ಪದವಾಚ್ಯರಾದ ಈ ಗುರುಸ್ಥಲದ ಜಂಗಮರೇ ಹದಿನೆಂಟುವರ್ಣಗಳಲ್ಲಿ ಶ್ರೇಷ್ಠರೆಂಬುದನ್ನು ಈ ಕೆಳಗಿನ ಆಧಾರದಿಂದ ದೃಢಪಡಿಸಿದ್ದಾರೆ:—

"ಅಷ್ಟಾದಶಾನಾಂ ವರ್ಣಾನಾಂ ಶ್ರೇಷ್ಠೋ ಮಾಹೇಶ್ವರೋ ಜನಾಃ
ಪ್ರ. ೭ )

ಮಾಹೇಶ್ವರರ ಶ್ರೇಷ್ಠತ್ವವೂ ಇವರಿಗೆ ಇರುವ ಗುರುತ್ವವೂ ಅನಾದಿ ಕಾಲ ಸಂಸಿದ್ಧವಾದುದೆಂಬುದು ಇದರಿಂದ ಸ್ಪಷ್ಟವಾಗಿದೆ.

ವೀರಶೈವ ಭಕ್ತನು ಹೆಣ್ಣು ಗಂಡಿನ ಸಂಬಂಧ ಮಾಡುವಾಗ ಮತ್ತು ಸಹಪಂಕ್ತಿ ಭೋಜನ ಮಾಡುವಾಗ ತನ್ನ ಜಾತಿಯವರೇ ಆದ ತಮ್ಮಂತಹ ಆಚಾರ-ವಿಚಾರವುಳ್ಳವರಲ್ಲಿಯೇ ಕನ್ಯೆಯನ್ನು ತರಬೇಕೆಂತಲೂ ಅಂತಹವರಿಗೇ ಕೊಡಬೇಕೆಂತಲೂ ಮತ್ತು ಸ್ವಮಾರ್ಗಾಚಾರನಿರತರಾದ ತಮ್ಮ ಜಾತಿಯವ

ರಲ್ಲಿಯೇ ಊಟಮಾಡಬೇಕೆಂತಲೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸಿದ್ಧಾಂತಶಿಖಾಮಣಿಯಲ್ಲಿ ನಿರ್ಣಯಕೊಟ್ಟಿದ್ದಾರೆ:—

"ಸ್ವಮಾರ್ಗಾಚಾರನಿರತಾಃ ಸ್ವಜಾತೀಯಾದ್ವಿಜಾಸ್ತು ಯೇ।
ತೇಷಾಂ ಗೃಹೇಷು ಭುಂಜೀತ ನೇತರೇಷಾಂ ಕದಾಚನ॥ ॥೨೯॥

"ಸ್ವಮಾರ್ಗಾಚಾರವರ್ತಿಭ್ಯಃ ಸ್ವಜಾತಿಭ್ಯಃ ಸದಾವ್ರತೀ।
ದದ್ಯಾತ್ತೇಭ್ಯಃ ಸಮಾದದ್ಯಾತ್ ಕನ್ಯಾಂ ಕುಲಸಮುದ್ಭವಾಂ ॥೪೯॥
(ಭಕ್ತಮಾರ್ಗ ಕ್ರಿಯಾಸ್ಥಲ)

ವಿರಕ್ತ ಮರಿತೋಂಟದಾರ್ಯರು "ಸ್ವಮಾರ್ಗಾಚಾರನಿರತಾಃ" ಎಂಬ ಸಿದ್ಧಾಂತಶಿಖಾಮಣಿಯ ಮೇಲಿನ ಶ್ಲೋಕಕ್ಕೆ ಹೀಗೆ ಟೀಕೆ ಬರೆದಿರುತ್ತಾರೆ:— "ದ್ವಿಜನ್ಮನಾಂ. ವೀರಶೈವಮತೋಚಿತಾಚಾರನಿಷ್ಠಾನಾಂ ಸ್ವಜಾತಿಸಂಭವಾನಾಂ ಭಕ್ತಮಾಹೇಶ್ವರಾಣಾಂ ಆಲಯೇಷು ತೇಷಾಂ ಪಂಕ್ತೌಚ ಭುಂಜೀಯಾತ್ ನಾನ್ಯತ್ರೀತಿ ತಾತ್ಪರ್ಯಂ," ಇಲ್ಲಿ ಭಕ್ತಮಾಹೇಶ್ವರರ ವರ್ಗಗಳು ಜಾತಿವಿಶಿಷ್ಟಗಳಾದುವೆಂಬುದನ್ನು ಸ್ಪಷ್ಟಪಡಿಸಿದ್ದಾರೆ.

ಹೀಗೆ ವೀರಶೈವಧರ್ಮದಲ್ಲಿ ಮಾಹೇಶ್ವರ ಮತ್ತು ಭಕ್ತರ ವಂಶಗಳು ಅನೂಚೀನವಾಗಿ ನಡೆದುಕೊಂಡು ಬಂದಿರುವುದನ್ನು ಸ್ಪಷ್ಟವಾಗಿ ತಿಳಿದುಕೊಳ್ಳಬಹುದಾಗಿದೆ.

ಕಾಸಿ ಕಮ್ಮಾರನಾಗುವ, ಬೀಸಿ ಮಡಿವಾಳನಾಗುವ ಕಸಬಿನ ಹೆಸರು ಹೊರವಲ್ಲ, ಅಥವಾ ಜಾತಿಯಲ್ಲ ಎಂದು ನಿಶ್ಚಳಗೊಳಿಸಿದ ಮಹಾನುಭಾವಿ ಬಸವಣ್ಣನವರ ಸಮಕಾಲೀನರಾಗಿದ್ದ ಸೊಲ್ಲಾಪುರದ ಸಿದ್ಧರಾಮೇಶ್ವರರೂ ಕೂಡ ಕುಲಮರ್ಯಾದೆಯನ್ನು ಮೀರಿ ನಡೆಯಬಾರದೆಂದು ಈ ಕೆಳಗಿನ ವಚನದಲ್ಲಿ ಸ್ಪಷ್ಟಪಡಿಸಿದ್ದಾರೆ:—

"ಅಂಗದ ಮೇಲೆ ಲಿಂಗವುಳ್ಳವರೆಲ್ಲ ಸಂಗಮನಾಥನೆಂಬ ಭಾವನೆ ಬಸವಣ್ಣಗಾಯಿತಲ್ಲದೆ, ಎನಗೆ ಆ ಭಾವವಿಲ್ಲ ನೋಡಾ! ಲಿಂಗೈಕ್ಯ ಶರಣರ ಕಂಡರೆ ನಂಬಿ ನೆಚ್ಚಿ ಅವರ ಪಾದಕ್ಕೆರಗುವುದು ಎನ್ನ ಮನವು. ಕುಲದಲ್ಲಿಯೂ ಅಧಿಕ, ಜ್ಞಾನದಲ್ಲಿಯೂ ಅಧಿಕನಾಗಲಾಗಿ ಶರಣಂಗೆ ಶರಣೆಂಬೆ

ಆ ಕುಲಹೀನ ಜ್ಞಾನವಂತನಲ್ಲಿ ಸಮರಸ ಸಲ್ಲದು ನೋಡಾ ಕಪಿಲ ಸಿದ್ಧಮಲ್ಲಿಕಾರ್ಜುನಾ!''

ಗುರುವೂಸಹ ಕುಲಕ್ರಮಾಗತಾಚಾರವುಳ್ಳವನಾಗಿರಬೇಕೆಂದು ಸಿದ್ಧಾಂತ ಶಿಖಾಮಣಿಯಲ್ಲಿ–

"ಕುಲಕ್ರಮಾಗತಾಚಾರಂ ಕುಮಾರ್ಗಾಚಾರವರ್ಜಿತಂ
ಸೇವೇತ ಪರಮಾಚಾರ್ಯಂ ಭಕ್ತೋ ಭಕ್ತಿಭಯಾನ್ವಿತಃ॥ ॥೪॥

(ಸಿ. ಶಿ. ಪರಿ, ೬)

ಎಂದು ಸ್ಪಷ್ಟಪಡಿಸಿರುವುದರಿಂದ ಕುಲ ಅಥವಾ ವಂಶಗಳು ಸನಾತನ ವಾದುವುಗಳು. ಕುಲಕ್ರಮಾಗತನಾದ ಭಕ್ತನು ಶಿಷ್ಯನು. ಕುಲಕ್ರಮಾಗತನಾದ ಮಾಹೇಶ್ವರನು ಗುರುವು; ಎಂಬ ಆಚರಣೆಯೂ ಸನಾತನವಾದುದು. ಇಂತಹ ಭಕ್ತನು ಗುರು ಲಿಂಗ ಜಂಗಮರನ್ನು ಸಮಾನಭಕ್ತಿಯಿಂದ ಪೂಜಿಸಬೇಕು. ಅವರ ತೀರ್ಥಪ್ರಸಾದವನ್ನು ಸೇವಿಸಬೇಕು. ಅವರಿಗೆ ಭೃತ್ಯನಾಗಿ ನಡೆದು ಕೊಳ್ಳಬೇಕು ಎಂಬುದನ್ನೂ ಕೂಡ ಶ್ರೀ ಜಗದ್ಗುರು ರೇಣುಕಾಚಾರ್ಯರು ಕಟ್ಟುನಿಟ್ಟಾಗಿ ಅಪ್ಪಣೆಕೊಡಿಸಿದ್ದಾರೆ.

ಮಾಹೇಶ್ವರರು (ಗುರುಸ್ಥಲದ ಜಂಗಮರು) ಸ್ವಜಾತಿವಿಹಿತವಾದ ಕರ್ಮಾಚಾರನಿರತರಾಗಿರಬೇಕೆಂಬುದನ್ನು ಶ್ರೀಪತಿಪಂಡಿತರು ಈ ಕೆಳಗಿನ ಆಧಾರದಿಂದ ಸ್ಪಷ್ಟಪಡಿಸಿದ್ದಾರೆ:—

"ಸ್ವಜಾತಿವಿಹಿತಂ ಕರ್ಮ ಕುರ್ವಂತಃ ಪೂಜಯಂತಿ ಯೇ।
ಭಕ್ತ್ಯಾ ಶ್ರೀಕಂಠಮನಿಶಂ ತೇ ವೈ ಮಾಹೇಶ್ವರಾ ಸ್ಮೃತಾಃ॥

(ಶ್ರೀಕರಭಾಷ್ಯ)

ಹೀಗೆ ಭಕ್ತಮಾಹೇಶ್ವರರಿಗೆ ಸ್ವಜಾತಿ ಅಥವಾ ಕುಲ ಅಥವಾ ವಂಶಗಳಿ ರುವುವನ್ನು ವೀರಶೈವಶಾಸ್ತ್ರದಲ್ಲಿ ಹೆಜ್ಜೆಹೆಜ್ಜೆಗೆ ಹೇಳುತ್ತ ಬಂದಿದ್ದಾರೆ. ಸಕ್ರಮವಾಗಿ ವೀರಶೈವಶಾಸ್ತ್ರಾನುವರ್ತಿಗಳಾದವರು ಈ ಪರಂಪರೆಯನ್ನು ಕಾಯ್ದುಕೊಂಡು ಬಂದಿರುತ್ತಾರೆ. ಭಕ್ತಮಾಹೇಶ್ವರ ವಂಶಗಳು ಯಾವು ದೋಂದು ಕಸಬಿನಿಂದ ಬಂದವುಗಳಲ್ಲ. ಬಿನ್ನಹ ತೀರಿಸುವವರು ಮಾಹೇಶ್ವರ ರೆಂದಾಗಲಿ, ಬಿನ್ನಹಕ್ಕೆ ಕರೆಯುವವರು ಭಕ್ತರೆಂದಾಗಲಿ ಅರ್ಥವಲ್ಲ. ಈ ವಂಶಗಳು ಪರಂಪರಾಗತವಾಗಿ ಬಂದವುಗಳು. ಈ ವಂಶಗಳು ಎಂದೋ

ಯುಗಯುಗಾಂತರಗಳಿಂದ ಗೋತ್ರಪ್ರರುಷರಿಂದ ಮತ್ತು ತಂದೆ-ತಾಯಿಗಳಿಂದ ಬಂದವುಗಳಾಗಿವೆ. ಅದಕ್ಕಾಗಿಯೇ ಭಗವದ್ಗೀತೆಯಲ್ಲಿಯೂ ಸಹ

"ಕುಲಕ್ಷಯೇ ಪ್ರಣಶ್ಯಂತಿ ಕುಲಧರ್ಮಾಃ ಸನಾತನಾಃ।
ಧರ್ಮೇ ನಷ್ಟೇ ಕುಲಂ ಕೃತ್ಸ್ನಮಧರ್ಮೋಽಭಿಭವತ್ಯುತ॥ ॥೪೦॥
(ಭ. ಗೀ. ಅ. ೧)

"ದೋಷೈರೇತೈಃ ಕುಲಘ್ನಾನಾಂ ವರ್ಣಸಂಕರಕಾರಕೈಃ।
ಉತ್ಸಾದ್ಯಂತೆ ಜಾತಿ ಧರ್ಮಾಃ ಕುಲಧರ್ಮಾಶ್ಚ ಶಾಶ್ವತಾಃ।೪೩॥
(ಭ. ಗೀ. ಅ. ೧.)

"ಕುಲವು ನಾಶವಾದರೆ ಸನಾತನಗಳಾದ ಕುಲಧರ್ಮಗಳೂ ನಾಶವಾಗುತ್ತವೆ. ಧರ್ಮವು ನಷ್ಟವಾದರೆ ಕುಲವೆಲ್ಲವೂ ನಾಶವಾಗಿ ಅಧರ್ಮವು ಹೆಚ್ಚುತ್ತದೆ."

"ಕುಲಘಾತಕರ ವರ್ಣಸಂಕರಸಂಬಂಧಗಳಾದ ಈ ದೋಷಗಳಿಂದ ಜಾತಿ-ಧರ್ಮಗಳೂ, ಶಾಶ್ವತವಾದ ಕುಲಧರ್ಮಗಳೂ ಹಾಳಾಗುತ್ತವೆ." ಎಂದು ಜಾತಿ-ಧರ್ಮಗಳನ್ನೂ, ಕುಲ-ಧರ್ಮಗಳನ್ನೂ ಕಾಪಾಡಿಕೊಳ್ಳಲು ಎಚ್ಚರಿಕೆ ನೀಡಲಾಗಿದೆ.

ಬಸವಣ್ಣನವರೂ ಕುಲಮರ್ಯಾದೆಯನ್ನು ಮೀರಿಲ್ಲ. ಈ ವಿಚಾರದಲ್ಲಿ ಬಸವಣ್ಣನವರ ಕೆಲ ವಚನಗಳನ್ನು ಇಲ್ಲಿ ಕೊಡಲಾಗುವುದು.

ಮೈಸೂರು ಶರಣಬಸಪ್ಪನವರಿಂದ ಸಂಗ್ರಹಿಸಲ್ಪಟ್ಟು ಅವರಿಂದಲೇ ಟೀಕೆ ಬರೆಯಲ್ಪಟ್ಟಿರುವ "ಬಸವಣ್ಣದೇವರ ವಚನಗಳು" (ಪ್ರಾಚೀನ ಕೈಬರಹದ ಪ್ರತಿ) ಎಂಬ ಗ್ರಂಥದ ಪುಟ ೩೬ ವಚನ ೧೨೩ ರಲ್ಲಿ "ಬೇಲುವದ ಮರನು ಹೂತು ಫಲವಾದ ತೆರನಂತೆ ಸಿರಿಯಾದರೇನು, ಶಿವಭಕ್ತಿಯಿಲ್ಲದನ್ನಕ್ಕ. ಹಾವುಮೆಕ್ಕೆಕಾಯಿ ಫಲವಾದರೇನು, ಕುಲವಿಲ್ಲದ ರೂಪು ಎಲ್ಲಿರ್ದರೇನು. ಬಚ್ಚಲನೀರು ತಿಳಿದಲ್ಲಿ ಫಲವೇನು, ಅವಗುಣಗಳ ಮೆಚ್ಚ ಕೂಡಲಸಂಗಮದೇವ"

ಟೀಕೆ:— "................... ಕುಲವಿಲ್ಲದ ರೂಪು ಎಲ್ಲಿದ್ದರೇನು

ಉತ್ತಮಕುಲದಲ್ಲಿ ರೂಪುಳ್ಳ ಸ್ತ್ರೀಯಳಿದ್ದರೆ ಭಕ್ತಮಾಹೇಶ್ವರರುಗಳು ತೆಗೆದುಕೊಂಡು ವಿವಾಹವಾಗುವರಲ್ಲದೆ ಕ್ಷೀಣಕುಲದಲ್ಲಿ ರೂಪುಳ್ಳ ಸ್ತ್ರೀಯಳಿದ್ದರೆ ಭಕ್ತ ಮಹೇಶ್ವರರುಗಳು ತೆಗೆದುಕೊಂಡು ವಿವಾಹವಾದಾರೆ? ಆಗ ಲರಿಯರು. ಹಾಂಗೆ ನಿರ್ವಂಚಕ ಸದ್ಭಕ್ತನು ಐಶ್ವರ್ಯವಂತನಾಗಿದ್ದರೆ ಉತ್ತಮ ಕುಲದಲ್ಲಿ ರೂಪುಳ್ಳ ಸ್ತ್ರೀಯಳಿದ್ದ ಹಾಂಗೆ.

ಪುಟ ೧೫೮ ವಚನ ೧೮೭

ಅಣ್ಣ-ತಮ್ಮ ಹೆತ್ತಣ್ಣ ಗೋತ್ರವಾದರೇನು?
ಲಿಂಗಸಾಹಿತ್ಯರಲ್ಲವವರ ಎನ್ನವರೆನ್ನೆನಯ್ಯಾ
ನಂಟುಭಕ್ತಿನಾಯಕನರಕ ಕೂಡಲಸಂಗಮದೇವಾ

ಟೀಕೆ:— ಅಣ್ಣ ಅಗ್ರಜನು. ತಮ್ಮ ಅನುಜನು. ಹೆತ್ತಣ್ಣ ಹೆತ್ತಪ್ಪನು ಗೋತ್ರವಾದರೇನು ಒಂದೇ ಕುಲವಾದರೇನು. ಲಿಂಗ ಸಾಹಿತ್ಯವಿಲ್ಲದವರ. ಅಂಗದಮೇಲೆ ಲಿಂಗಸಮ್ಮಂಧಮಾಡಿಕೊಂಡೂ ಲಿಂಗಪೂಜೆಯಮಾಡದವರ ಎನ್ನವರೆನ್ನೆನಯ್ಯಾ ಎನ್ನ ವಂಶೀಭೂತದವರೆಂದು ಹೇಳೆನಯ್ಯಾ.

ಇದೇವಚನಕ್ಕೆ "ವಿಹಾರಿ" ಎನ್ನುವವರು ತಾವು ಸಂಗ್ರಹಿಸಿದ "ಬಸವಣ್ಣನವರ ವಚನಗಳು'' ಎಂಬ ಗ್ರಂಥದಲ್ಲಿ ಹೀಗೆ ಟೀಕೆ ಬರೆದಿರುತ್ತಾರೆ.—

"ಅಣ್ಣ-ತಮ್ಮ ತಂದೆ-ತಾಯಿ ಎಲ್ಲರೂ ಒಂದೇ ವಂಶಜರಿದ್ದರೂ ಸಹಿತ ಯಾರ ಕೊರಳಲ್ಲಿ ಲಿಂಗವಿರುವುದಿಲ್ಲವೋ ಅವರು ನನ್ನ ಬಂಧುಗಳಲ್ಲ ...... ...........ಬಂಧುಗಳು ಬಳಗದವರೆಂದು ನಾನು ಅವರೊಡನೆ ಕೂಡಿದೆನಾದರೆ ನನಗೆ ಘೋರ ಪಾಪತಟ್ಟಿ ರವರವ ನರಕಪ್ರಾಪ್ತವಾಗುತ್ತದೆ.

ಹೀಗೆ ಅನೇಕ ವಚನಗಳಲ್ಲಿ ಬಸವಣ್ಣನವರು ವಂಶ-ಕುಲ-ಗೋತ್ರಗಳ ಶ್ರೇಷ್ಠತೆಯನ್ನು ಎತ್ತಿಹಿಡಿದಿದ್ದಾರೆ.

ಸ್ವತಃ ಬಸವಣ್ಣನವರು ಶಿವದೀಕ್ಷಾಸಂಪನ್ನರಾಗಿ, ಲಿಂಗದೇಹಿಯಾಗಿ ''ಕರ್ಮಲತೆಯೊಂತಿಪ್ಪ ಜನಿವಾರವಂ ಕಳೆದು ಬಿಸುಟು" ಸಿದ್ಧಪುರುಷರಾಗಿದ್ದರೂ ಕಲ್ಯಾಣದ ಸಿದ್ಧದಂಡೇಶನ ಮಗಳನ್ನು (ನೀಲಾಂಬಿಕೆ) ಲಗ್ನವಾಗುವಾಗ "ಕುಲವೊಂದೆ ಕುಲವಾಗೆ ಗೋತ್ರವುಂ ಸಮವಾಗೆ ನೆಲೆವಿಚಾರಿಸೆ

ತನ್ನ ಸಂಬಂಧವೊಂದಾಗೆ" (ಬ. ದೇ. ರ. ಸ್ಥಲ ೫ ಪದ್ಯ ೧೧೦) ಸಂತಸ ಪಟ್ಟುದೂ, ಆತನಲ್ಲಿ ವಾಸಮಾಡಿದನೆಂಬುದೂ ಸ್ಪಷ್ಟವಾಗಿರುವಾಗ ಕುಲ ವಿಚಾರ ಅತಿಮಹತ್ವವಾದುದೆಂಬುದು ಆಗ ಪ್ರಚಾರದಲ್ಲಿತ್ತು.

ಕಲ್ಯಾಣದ ಈ ಸಿದ್ಧದಂಡಾಧಿಪನು "ಕಮ್ಮೆಕುಲಕ್ಷತ್ರಿಯೆನಿಪ ಸಿದ್ಧ ದಂಡಾದಿಪಂ" (ಬ. ದೇ. ರ, ಸ್ಥಲ ೫ ಪದ್ಯ. ೭೬) ಕಮ್ಮೆಕುಲದ ಬ್ರಾಹ್ಮಣನಾಗಿದ್ದನು. ಇವನಲ್ಲಿಯೇ ಬಸವಣ್ಣನು ವಾಸವಾಗಿದ್ದು ಇವನು ತೀರಿದನಂತರ ಈತನ ಆಸ್ತಿಯೆಲ್ಲವೂ ಬಸವಣ್ಣನಿಗೆ ಸೇರುತ್ತದೆ.

ಬಸವಣ್ಣನವರು ಲಗ್ನವಾಗುವಾಗ "ಸತ್ಕುಲಸಾದೃಶ್ಯ ಸುಶೀಲೆಯುರಪ್ಪ ಗಂಗಾದೇವಿ. ಮಾಯಾದೇವಿ (ನೀಲಾಂಬಿಕೆ) ಯುರೊಡನೆ ತನ್ನ ವಿವಾಹವಂ ಮಾಡಿ" (ಬ. ದೇ. ರ. ಸ್ಥಲ ೬ ವಚನ ೧೦ ಆರಂಭ) ಕುಲವನ್ನು ಚೆನ್ನಾಗಿ ವಿಚಾರಮಾಡಿಯೇ ಸಿದ್ಧದಂಡೇಶನ ಕುಲವೂ, ತನ್ನ ಕುಲವೂ ಒಂದೆಆದ್ದರಿಂದ ವಿವಾಹ ಮಾಡಿಕೊಂಡನೆಂಬುದು ಸ್ಪಷ್ಟವಾಗಿ ಗೊತ್ತಾಗುತ್ತದೆ.

ಇತ್ತ ಬಾಗೇವಾಡಿಯ ಬಸವಣ್ಣನ ತಂದೆ ಮಾದರಸನೂ ಕೂಡ ಕಮ್ಮೆ ಕುಲದ ಬ್ರಾಹ್ಮಣನಾಗಿದ್ದನೆಂಬುದನ್ನು ಹರಿಹರ ಕವಿಯು ಈ ಕೆಳಗಿನಂತೆ ಸ್ಪಷ್ಟಪಡಿಸಿದ್ದಾನೆ:— "ಅಗ್ರೇಶ್ವರಂ ಕಮ್ಮೆ ಕುಲದಿಂದೆ ಮೆರೆದಿರ್ಪ ವಿಪ್ರನಿರ್ಪಂ ಮಾದಿರಾಜನು" (ಬ. ದೇ. ರ, ಸ್ಥಲ ೧ ಪದ್ಯ ೩)

ಬಸವಣ್ಣನವರ ಮೊದಲನೆಯ ಪತ್ನಿ ಗಂಗಾಂಬಿಕೆಯು ಆತನ ಸೋದರ ಮಾವನ ಮಗಳಾಗಿದ್ದುದರಿಂದ ಆ ಬಾಂಧವ್ಯವು ಕೂಡ ಕುಲಮರ್ಯಾದೆಗೆ ಹೊಂದಿಕೊಂಡೇ ಆಗಿದೆಯೆಂಬುದು ಸ್ಪಷ್ಟವಾಗಿಯೇ ಇದೆ.

ಹೀಗೆ ಬಸವಣ್ಣನವರು ತಮ್ಮ ಕುಲಮರ್ಯಾದೆಯನ್ನು ಕಾಪಾಡಿಕೊಂಡಿದ್ದರೆಂಬುದು ಸುಸ್ಪಷ್ಟವಾಗುತ್ತದೆ.

(೬) ನೆಯ ಆಕ್ಷೇಪ:—

ಭಕ್ತತ್ವ. ಮಾಹೇಶ್ವರತ್ವ, ಗುರುತ್ವ, ಜಂಗಮತ್ವ ಇವು ಮಾನವನಿಗೆ ಜನನದಿಂದ ಬಂದು ಮರಣದವರೆಗೂ ಅಂಟಿಕೊಂಡಿರುವ ಲಕ್ಷಣಗಳಲ್ಲ.

## ಇದಕ್ಕೆ ನಮ್ಮ ಉತ್ತರ:—

ಭಕ್ತ-ಮಾಹೇಶ್ವರ (ಜಂಗಮ) ಇವು ಹುಟ್ಟಿನಿಂದ ಬಂದ ವಂಶಗಳೇ. ಆದಕಾರಣ ಅವು ಮರಣದವರೆಗೂ ಅವರಿಗೆ ಅಂಟಿಕೊಂಡೇ ಇರುತ್ತವೆ. ಭಕ್ತವಂಶ, ಮಾಹೇಶ್ವರವಂಶಗಳು ಬೇರೆ ಬೇರೆಯಾಗಿರುವುದನ್ನು ಮೇಲೆಯೇ ಸ್ಪಷ್ಟಪಡಿಸಿದ್ದೇವೆ. ಇವೆರಡೂ ಅನೂಚಾನವಾಗಿ ಬಂದ ವಂಶಗಳಾದುದರಿಂದಲೇ ವೇದಾಗಮಕಾಲದಿಂದ ಬಸವೇಶ್ವರನ ಕಾಲದವರೆಗೆ, ಅಲ್ಲಿಂದಿಲ್ಲಿಯವರೆಗೆ ಈ ಭಕ್ತ-ಮಾಹೇಶ್ವರ ವಂಶಗಳು ಎಲ್ಲಕಡೆಗೂ ಪ್ರಸಿದ್ಧವಾಗಿ ಮೆರೆಯುತ್ತಲೇ ಇವೆ. ಬಸವಪುರಾಣದಲ್ಲಿ ಹೆಜ್ಜೆ ಹೆಜ್ಜೆಗೆ ಭಕ್ತ ಮತ್ತು ಮಾಹೇಶ್ವರರನ್ನು ಪ್ರತ್ಯೇಕಿಸಿ ಗೌರವಿಸಿರುವುದು ಎದ್ದುಕಾಣುತ್ತದೆ. ಭೀಮಕವಿಯ ಬಸವಪುರಾಣದ ೩ನೆಯ ಸಂಧಿ ೪೧ನೆಯ ಪದ್ಯದಲ್ಲಿ ಬಸವಣ್ಣನು ದೊಡ್ಡವನಾಗುತ್ತ "ಪರಮ ಮಾಹೇಶ್ವರರ ನೋಲವಿಂ, ಪರಮನೆಂದೇ ಕಾಣ್ಬನಾಗಲು, ಶರಣಮಾನಸನಿಳಯನೆನಿಸಿದ ಬಸವಸುಕುಮಾರ." ಎಂಬ ಪದ್ಯದಿಂದ ಮಾಹೇಶ್ವರರಮೇಲೆ ಬಸವಣ್ಣನು ಅಪಾರವಾದ ಭಕ್ತಿಯನ್ನಿಟ್ಟಿದ್ದನೆಂದು ಸ್ಪಷ್ಟವಾಗುತ್ತದೆ. ಬಸವಪುರಾಣದ ೩ನೆಯ ಸಂಧಿ ೬೩ನೆಯ ಪದ್ಯದಲ್ಲಿ "ವೀರಮಾಹೇಶ್ವರರೆ ಗತಿಯೆನಗಿದುವೆ ನಿಶ್ಚಯವು" ಎಂದು ಬಸವಣ್ಣನು ತಂದೆಯನ್ನು ಕುರಿತು ಮುಂಜೀ ಬಂಧನವನ್ನು ತಿರಸ್ಕರಿಸುತ್ತ ತನ್ನ ಗುರುಪರಂಪರೆಯನ್ನು ಎತ್ತಿ ಹಿಡಿದಿದ್ದಾನೆ.

ಬಸವಣ್ಣನ ಗುರುವಾದ ಸಂಗಮನಾಥನು (ಜಾತವೇದಿಮುನಿ) ಬಸವಣ್ಣನಿಗೆ ಜಂಗಮಪ್ರಾಶಸ್ತ್ಯವನ್ನು ಈ ಕೆಳಗಿನಂತೆ ಭೋಧೆ ಮಾಡಿದ್ದಾನೆ:—

"ಜಂಗಮವ ನಾನೆಂದೆ ನೋಡಿರು।
ಸಾಂಗದಿಂ ತ್ರಿವಿಧಪ್ರಸಾದಾ।
ಸಂಗದೊಳು ಪರಿಣಾಮಿಸುತಮಿರು ಭಕ್ತರಂ ಕಂಡು॥
ಪೊಂಗಿ ನೀನಿದಿರೆದ್ದು ನಮಿಸಿ ಕ।
ರಂಗಳಂ ಮುಗಿದವರ ಭಕ್ತಿಗು।
ಣಂಗಳಂ ಕೊಂಡಾಡಿ ಮುಂಡಾಡುತ್ತಮಿರು ಬಸವ॥

(ಸಂಧಿ ೪ ಪದ್ಯ ೩೩)

ಈ ಪದ್ಯದಿಂದ ಜಂಗಮರನ್ನು ಸಾಕ್ಷಾತ್ ದೇವರೆಂದೇ ಭಾವಿಸ ಬೇಕೆಂತಲೂ, ಭಕ್ತರನ್ನು ವಂದಿಸಬೇಕೆಂತಲೂ ಸ್ಪಷ್ಟವಾಗುವುದ ಲ್ಲದೆ ಜಂಗಮವರ್ಗ, ಭಕ್ತವರ್ಗ ಬೇರೆಬೇರೆ ಇದ್ದಿತೆಂಬುದು ನಿಚ್ಚಳ ವಾಗಿ ಹೊಳೆಯುತ್ತದೆ.

ಇದೇ ಸಂಧಿಯ ೭೫ನೇ ಪದ್ಯದಲ್ಲಿ ಬಸವೇಶ್ವರನು ಭಕ್ತೋತ್ತಮನೆಂ ಬುದನ್ನು ಈ ಕೆಳಗಿನಂತೆ ವಿವರಿಸಿದ್ದಾನೆ:—

"ಭಕ್ತಮುಖಪಂಕಜದಿವಾಕರ।
ಭಕ್ತನೇತ್ರಚಕೋರಹಿಮಕರ।
ಭಕ್ತಭವಸಮಿದಗ್ನಿ ಭಕ್ತಾಪದ್ಘನಸಮೀರ॥
ಭಕ್ತಸಸ್ಯಧರಿತ್ರಿ ಭಕ್ತಾ।
ಸಕ್ತಸೌಖ್ಯಾನಂದವಾರಿಧಿ।
ಭಕ್ತಶಬ್ದಾಕಾಶ ಭಕ್ತಾತ್ಮಕ ಬಸವ ಶರಣಃ"॥

ಇದೇ ಪುರಾಣದ ೬ನೇ ಸಂಧಿಯ ೫ನೇ ಪದ್ಯದಲ್ಲಿ:—

".... .... .... .... ... ... ... ... .... ... .... ....
ಶರಣರೇನೆಂದೊಡೆಯುವರಿಗು।
ತ್ತರವನೀಯದ ಭಾಷೆ ಜಂಗಮ।
ವರನಾಗಳು ಪ್ರಾಣಲಿಂಗವೆನಿಪ್ಪುದದು ಭಾಷೆ॥

ಎಂದು ಬಸವಣ್ಣನವರ ಜಂಗಮನಿಷ್ಠೆ, ಶರಣ(ಭಕ್ತ)ನಿಷ್ಠೆ ಹೇಗಿ ದ್ದಿತೆಂಬುದನ್ನು ಸ್ಪಷ್ಟಪಡಿಸುವಾಗ ಇಲ್ಲಿ ಇಬ್ಬರನ್ನೂ ಪ್ರತ್ಯೇಕಿಸುತ್ತಾನೆ. ಇದರಿಂದಾಗಿ ಶರಣರಾದ ಭಕ್ತರೂ, ಜಂಗಮರಾದ ಮಾಹೇಶ್ವರರೂ ಆಗ ಸುಪ್ರಸಿದ್ಧರಾಗಿದ್ದುದು ಕಂಡು ಬರುತ್ತದೆ.

ಇದೇ ಸಂಧಿಯ ೨೪ ನೇ ಪದ್ಯದಲ್ಲಿ ಬಸವಣ್ಣನನ್ನು ಕಾಣಲು ಬಂದ ವರಲ್ಲಿ ಲಿಂಗವಂತ ಭಕ್ತರೂ, ಜಂಗಮರೂ ಇದ್ದರೆಂತಲೂ ಅವರಿಗೆ ಬಸವಣ್ಣನವರು ಅಪಾರವಾದ ಭಕ್ತಿಯನ್ನು ಸಲ್ಲಿಸಿದರೆಂತಲೂ ಈ ಕೆಳಗಿನಂತೆ ವಿವರಣೆಯಿದೆ:—

.... ... ... .... .... .... .... ... ... ... ...

"ಲಿಂಗಭಕ್ತಾಂಘ್ರಿಗಳ ಮೇಲ।
ಷ್ಟಾಂಗವೆರಗಿ ನಮಿಸಿ ನಮಿಸಿ ವರ।
ಜಂಗಮಚರಣರಾಜಶಯನದ ಲಿತಾಂ ಘೊರಳಿ ಪೊರಳಿ॥"

ಈ ಪದ್ಯದಲ್ಲಿಯೂ ಭಕ್ತರು ಮತ್ತು ಜಂಗಮರು ಬೇರೆ ಬೇರೆಯಾಗಿದ್ದುದೂ, ಅವರಿಗೆ ಸಲ್ಲಿದ ಸೇವೆಯು ಒಂದಕ್ಕಿಂತ ಒಂದು ಹಿರಿಯದಾಗಿದ್ದುದೂ ಕಂಡುಬರುತ್ತದೆ. ಭಕ್ತರಿಗೆ ಬಸವಣ್ಣನವರು ನಮಸ್ಕರಿಸಿದರೆ ಜಂಗಮರ ಪಾದಧೂಳಿಯಲ್ಲಿ ಹೊರಳಾಡಿದರು ಎಂದು ಈ ಪದ್ಯದಲ್ಲಿ ಸ್ಪಷ್ಟವಾಗಿದೆ.

ಇದೇ .ಪುರಾಣದ ಸಂಧಿ ೨೩ ಪದ್ಯ ೮೯ ರಲ್ಲಿ – ಮಡಿವಾಳ ಮಾಚಯ್ಯನು ಬಸವಣ್ಣನಿಗೆ ನಾನೇ ಮಹಾಭಕ್ತನೆಂದು ಗರ್ವಿಸಬಾರದೆಂದು ತಿಳಿಸುವಾಗ ಈ ಕೆಳಗಿನಂತೆ ನುಡಿದಿದ್ದಾನೆ.

"ಲಿಂಗಜಂಗಮ ಪೂಜನಂಗಳೆ।
ತುಂಗಚಾತುರ್ವರ್ಗಸೌಖ್ಯ ಫ।
ಲಂಗಳಿರೆ ಮಿಗಿಲೆಂದು ಧರಣಿಯೊಳಿದ್ದಳಾನೆಂಬ॥
ಮುಂಗಳಪ್ರದ ಸತ್ಕ್ರಿಯೆಗಳೊಳಿ।
ಹಂಗೆ ಗರ್ವಿಸಿ ನುಡಿವವಂಗಂ।
ಸಾಂಗವಹುದೇ ಭಕ್ತಿಪರಿಣಯ ಬಸವಸುಕುಮಾರ॥"

ಈ ಪದ್ಯದಲ್ಲಿ ಜಂಗಮ ಪೂಜೆಯ ಶ್ರೇಷ್ಠತೆಯನ್ನು ಎತ್ತಿ ಕಟ್ಟಿದ್ದಾನೆ.

ಇದೇ ಬಸವಪುರಾಣದ ಸಂಧಿ ೩೬ ಪದ್ಯ ೨೧ರಲ್ಲಿ ಕೇತಯ್ಯನವರ ಚರಿತ್ರ ಪ್ರಸಂಗದಲ್ಲಿ ಬಸವಣ್ಣ ಪ್ರಾಣಬಿಟ್ಟಾಗ, ಅಲ್ಲಿ ಆದ ಕೋಲಾಹಲ ಸಂದರ್ಭದಲ್ಲಿ ಭಕ್ತಗಣವೂ ಸೇರಿದುವಲ್ಲದೆ ಜಂಗಮಸಮೂಹವೂ ಸಿಂಹಾಸನದಲ್ಲಿ ಮುಹೂರ್ತಮಾಡಿತ್ತೆಂದು ಸ್ಪಷ್ಟವಾಗುತ್ತದೆ. ಇದರಿಂದಲೂ ಭಕ್ತಗಣ ಬೇರೆ, ಸಿಂಹಾಸನದಲ್ಲಿ ಕುಳಿತಿದ್ದ ಜಂಗಮಾವಳಿ ಬೇರೆ ಎಂಬುದನ್ನು ಸ್ಪಷ್ಟವಾಗಿ ತಿಳಿಯಕೊಳ್ಳಬಹುದು. ಆ ಪದ್ಯ ಈ ಕೆಳಗಿನಂತೆ ಇದೆ:–

"ಆ ಸಮಯದೊಳು ಭಕ್ತಗಣಸಿಂ।
ಹಾಸಸದೊಳಿಹ ಜಂಗಮಾವಳಿ।
ಯಾಸರದ ಕೋಲಾಹಲಧ್ವಾನಂಗಳಾಕ್ರಮಿಸೆ॥
ಐಸರೊಳು ಕಲ್ಯಾಣಕಟಕ ನಿ।
ವಾಸಿಗಳು ಹಾ ಹಾ ರವಂಗಳು।
ಸೂಸೂವಾಸನರಾಗಿ ಬಸವಾ ಎನುತೊರಲುತಿರಲು॥"

ಕೇತಯ್ಯ ಮತ್ತು ಬಸವಣ್ಣ ಇವರು ಬದುಕಿದನಂತರ ಮಡಿವಾಳ ಮಾಚಯ್ಯನು "ಜಂಗಮಕೆ ಭಕ್ತಾವಳಿಗೆ ಸಾಷ್ಟಾಂಗವೆರಗಿ" ದ ವಿಚಾರ ವನ್ನು ಇದೇ ಪುರಾಣದ ಸಂಧಿ ೩೬ ಪದ್ಯ ೬೨ ರಲ್ಲಿ ಸ್ಪಷ್ಟಪಡಿಸಿದ್ದಾರೆ. ಇಲ್ಲಿಯೂಸಹ ಜಂಗಮ ಮತ್ತು ಭಕ್ತರ ಸಮೂಹಗಳು ಪ್ರತ್ಯೇಕವಾಗಿ ರುವುದನ್ನು ಕಾಣಬಹುದಾಗಿದೆ.

ಈ ಪುರಾಣದ ಸಂಧಿ ೪೪ ಪದ್ಯ ೧೨–೧೩ ರಲ್ಲಿ ಗುರುಭಕ್ತಾಂಡಾರಿಯ ಚರಿತ್ರ ಪ್ರಸಂಗದಲ್ಲಿ ಅವನು ಮಾನನೊಂದು ಪಶ್ಚಾತ್ತಾಪಪಡುವಾಗ

"…. … …. …. …. …. …. …. …. ….
ಬಳಲಿ ಬಂದಂತಾರ್ಯರುಗಳಂ।
ನಿಲಿಸಿ ಧಿಕ್ಕರಿಸಿದೆನ ಜಂಗಮ।
ಕುಲಕೆ ಕಂಡಷ್ಟಾಂಗವರೆಗೆನೆ ಮುಗಿಯೆನೇ ಕೈಯ್ಯ॥"
"ಅನುಮೇಶನ ಭಕ್ತರನಂದಾ।
ಸೀನದಲಿ ಕಂಡಾತ್ಮದಲಿ ಅಹ।
ಮಾನಭಾವದೊಳುನ್ನತಾಸನದಲ್ಲಿ ಕುಳ್ಳಿತೆನೆ॥
ಸಾನುಭವ ಜಂಗಮವು ಒರೆ ಸಮ।
ಯಾನುಕೂಲ ಕ್ರಿಯೆಗಳಂ ಸ।
ನ್ಮಾನದಿಂದವೆ ಸಲಿಸೆನೇ ಘಟುಗರ್ವವೃತ್ತಿಯಲಿ"॥

ಈ ಪದ್ಯಗಳಲ್ಲಿ ಜಂಗಮ ಮತ್ತು ಭಕ್ತರು ಬೇರೆಬೇರೆಯಾಗಿರುವದು ಸ್ಪಷ್ಟವಾಗುತ್ತದೆ.

ಇದೇ ಪುರಾಣದ ಸಂಧಿ ೨೫ ಪದ್ಯ ೪೭, ೪೮, ೪೯ರಲ್ಲಿ ನಂಬಿಯಣ್ಣನನ್ನು ಕುರಿತು ಕೈಲಾಸಪತಿ ಶಂಕರನು ಭಕ್ತರ ಶ್ರೇಷ್ಠತೆಯನ್ನೂ ಜಂಗಮರ ಪೂಜ್ಯತೆಯನ್ನೂ ಈ ಕೆಳಗಿನಂತೆ ವಿವರಿಸಿದ್ದಾನೆ:—

"ಎಮಗೆ ಮದ್ಭಕ್ತರಿಂಗೆ ಭಕ್ತಿ।
ಕ್ರಮದಿ ಬೇರೆ ವಿಭೇದವಿಲ್ಲಂ।
ತಮಳ ಭಕ್ತರಿಗಾಗಳುಂ ನಾಂ ಪ್ರಾಣವಾಗಿಹೆನು॥
ಎಮಗೆ ಭಕ್ತರು ಪ್ರಾಣವಾಗಿಹ।
ರೆಮಗೆ ಭಕ್ತರ ತನುವೆ ತನು ಸ।
ತ್ಯಮಿದು ಭಕ್ತರ ಸೇವೆಯೇ ಮತ್ಪಾದಸೇವನೆಯು॥

ಭಕ್ತ ತನುವೆಮದರ್ಪಣಂ ಮ।
ದ್ಭಕ್ತ ನುತಿಯೇ ಮದ್ಗುಣಸ್ತುತಿ।
ಭಕ್ತನಿಂದೆಯೆ ವಿವರಿಸಲು ಮತ್ಕೃತ್ಸ್ನ ನಿಂದೆಯದು॥
ವ್ಯಕ್ತವೆಮ್ಮಯ ಜಂಗಮವನಾ।
ಸಕ್ತಿಯಲಿ ಮನ್ನಿಸದಿರಲು ವಿಫ।
ಲೋಕ್ತಿಯದು ಶಿವಪೂಜನಂ ಸ್ಥಾವರವು ನಿಷ್ಫಲವು॥

ಯುಕ್ತಿಸುವೊಡಿದು ದಿಟವೆನುತ।
ಶ್ರುತಿಸೂಕ್ತಿ ಸಾರುವುದಾಗಿ ನಿಶ್ಚಲ।
ಭಕ್ತವಶ್ಯನವಶ್ಯಮುಂ ಮದ್ಭಕ್ತವತ್ಸಲನು॥
ಭಕ್ತಲೋಕಾಶ್ರಿತನು ನಾ ಮ।
ದ್ಭಕ್ತ ಚಿತ್ತಾಧೀನಮಪ್ಪೆನು।
ಭಕ್ತಿಗೊಲಿದಿಪ್ಪೆನು ಪ್ರಸಿದ್ಧಂ ಕೇಳದೆಂತೆನಲು॥

ಈ ಪದ್ಯಗಳಲ್ಲಿ ಶಿವನು ನನಗೂ ನನ್ನ ಭಕ್ತರಿಗೂ ಭೇದವಿಲ್ಲದಿದ್ದರೂ ಭಕ್ತನು ಜಂಗಮ ಸೇವೆಯಲ್ಲಿ ಅಳಿಮನಸ್ಸುಮಾಡಿದರೆ ಆತನ ಭಕ್ತಿಯು ವ್ಯರ್ಥವಾಗುವುದಲ್ಲದೆ, ಅವನು ಮಾಡುವ ಶಿವ ಪೂಜೆಯು ನಿಷ್ಫಲವಾಗುವುದೆಂದು ಅಪ್ಪಣೆಮಾಡಿದ್ದಾನೆ. ಇದರಿಂದ ಬಸವಣ್ಣನವರು ಅಭಿಪ್ರಾಯಪಡುವಂತೆ ಸರ್ವಕಾಲಕ್ಕೂ ಜಂಗಮವು

ಸ್ವಾಮಿಯಾಗಿಯೂ ಭಕ್ತನು ಭೃತ್ಯನಾಗಿಯೂ ಇರಬೇಕೆಂದು ನುಡಿದ ಸ್ವಾಮಿಭೃತ್ಯಾಚಾರವು ನಿರ್ಣಯಾತ್ಮಕ ಸಿದ್ಧಾಂತವೆಂದು ಸ್ಪಷ್ಟ ವಾಗುವುದು.

ಈ ಬಸವಪುರಾಣದ ಸಂಧಿ ೪೫ ರಲ್ಲಿ ವೀರಮಾಹೇಶ್ವರಾಚಾರ್ಯ ರಾದ ರೇವಣಾರಾಧ್ಯರ ಚರಿತ್ರೆ ಬಂದಿದೆ. ಒಬ್ಬ ರಾಜಕುಮಾರನು ಹೊಸ ದಾಗಿ ಲಗ್ನವಾಗಿ ತನ್ನ ಪತ್ನೀಸಮೇತನಾಗಿ ರೇವಣಾರಾಧ್ಯರ ಆಶೀರ್ವಾದ ಪಡೆಯಲು ಬರುತ್ತಾನೆ, ಆಗ ಆತನು

"ಹಿರಿಯರುಗಳುತ್ತಮರು ಸದಯಾ।
ಪರರು ಪೂಜ್ಯರು ಪರಮಮಾಹೇ।
ಶ್ವರರು ನೀವೆಂದಾಂ ನಮಿಸೆ ಲೇಸಾಗಲಿ ಎಂದು॥
ಹರಸಲೊಲ್ಲದೆ ಸುಮ್ಮನಿಹುದಿದು।
ಪುರುಷತನವೇ ಗುಣವೆ ಪೆಂಪೇ।
ಗರುವಿಕೆಯೆ ಗಂಭೀರತೆಯೆ ಸನ್ಮಾರ್ಗವರ್ತನವೆ॥ ॥೧೦॥

ಎಂದು ಮುಂತಾಗಿ ಎಷ್ಟು ವಿಧವಾಗಿ ಬೇಡಿಕೊಂಡರೂ ರೇವಣಾ ರಾಧ್ಯರು ಆಶೀರ್ವಾದ ಮಾಡುವುದಿಲ್ಲ. ರಾಜಕುಮಾರನು ರೇವಣಾರಾಧ್ಯ ಗುರುಗಳನ್ನು ಪರಿಪರಿಯಾಗಿ ಹೀಯಾಳಿಸಲು ಪ್ರಾರಂಭಿಸುವನು. ಆಗ ರೇವಣಾರಾಧ್ಯರು ಅಯ್ಯಾ! ನಾಳೆ ಮಧ್ಯಾಹ್ನಕ್ಕೆ ನಿನ್ನ ಆಯುಷ್ಯ ಮುಗಿ ಯುತ್ತದೆ. ನಿನಗೆ ನಾನು ಆಶೀರ್ವಾದ ಮಾಡಲಾರೆ ಎನ್ನುತ್ತಾರೆ. ಆಗ ರಾಜಕುಮಾರನು ಸಿಟ್ಟಿಗೆದ್ದು:—

"ನಿನ್ನ ಮಾತುಗಳೆಲ್ಲವುಂ ದಿಟ।
ವಿನ್ನು ನಾಳಿನ ದಿನಕೆ ಸತ್ತೊಡೆ।
ನನ್ನಿಯುಳ್ಳಯ್ಯಗಳು ಲೋಕಕೆ ನೀವೆ ಹೋಯೆನುತ ॥೨೦॥

ನಾಳೆಯ ದಿನ ನಿಮ್ಮ ಮಾತಿನಂತೆ ನಾನು ಸತ್ತರೆ ನೀವು ನಿಜವಾದ "ಅಯ್ಯ"ಗಳಾಗುತ್ತೀರಿ. ಎಂದು ಹಳಿಯುತ್ತ ಮನೆಗೆ ಬರುತ್ತಾನೆ,

ಈ ಮೇಲ್ಕಂಡ ಪದ್ಯಗಳಲ್ಲಿ "ಪರಮ ಮಾಹೇಶ್ವರರು" ಎಂದು ರೇವಣಾರಾಧ್ಯರಿಗೆ ಸಂಬೋಧಿಸಿರುವುದನ್ನೂ ಪುನಃ ಅವರನ್ನೇ "ನನ್ನಿಯು

ಳ್ಳಯ್ಯಗಳು" ಎಂದು ಕರೆದಿರುವುದನ್ನೂ ನೋಡಿದರೆ ಜಂಗಮರಿಗೆ ಸ್ವಾಭಾವಿಕವಾಗಿ "ಅಯ್ಯನವರು" "ಮಾಹೇಶ್ವರರು" ಎಂದು ಕರೆಯುವ ರೂಢಿಯು ಪ್ರಚಲಿತವಾಗಿರುವುದು ಸ್ಪಷ್ಟಗೊಳ್ಳುತ್ತದೆ.

ಹೀಗೆಯೇ ಆಧಾರಗಳನ್ನು ವಿವರಿಸುತ್ತ ಹೋದರೆ ಗ್ರಂಥವು ವಿಪರೀತವಾಗಿ ಬೆಳೆಯಬಹುದು. ಆದುದರಿಂದ ಶ್ರೀ ಹರಳೆಣ್ಣೆಯವರ ಉಳಿದ ೭, ೮ ಈ ಆಕ್ಷೇಪಗಳಿಗೆ ಕೂಡ ಮೇಲೆ ಉಲ್ಲೇಖಿಸಿರುವ ಪ್ರಮಾಣಗಳೇ ಉತ್ತರಗಳಾಗಿ ಸಾಕಾಗಬಹುದೆಂದು ಭಾವಿಸುತ್ತೇವೆ.

## ಬಸವಣ್ಣನವರ ವಚನಗಳ ಸತ್ಯಾರ್ಥ



ಇನ್ನು ಶ್ರೀ ಹರಳೆಣ್ಣೆಯವರು ಆಕ್ಷೇಪಿಸಿಕೊಂಡಿರುವ ವಚನಗಳ ವಿಚಾರ:—

ಶ್ರೀ ಹರಳೆಣ್ಣೆಯವರು "ವಚನವನ್ನು ವಿರೂಪಗೊಳಿಸಿ ಅಚ್ಚುಹಾಕಿಸಿದ್ದಾರೆ" ಎಂದಿದ್ದಾರೆ, ಇದು ಇವರು ಮಾಡಿರುವ ಬಹು ದೊಡ್ಡ ಶೋಧನೆ. 'ಭಕ್ತನಾಗಿ' ಎಂದು ಆರಂಭವಾಗಿರುವ ಬಸವಣ್ಣನವರ ವಚನದಲ್ಲಿ "ಬಸವಣ್ಣದೇವರ ವಚನಗಳು" (ಮೈಸೂರು ಶರಣಬಸಪ್ಪನವರಿಂದ ಬರೆಯಲ್ಪಟ್ಟ ಕೈಬರಹದ ಪ್ರತಿ.) ಎಂಬ ಪ್ರಾಚೀನ ಗ್ರಂಥದಲ್ಲಿ "......................ಲಿಂಗಜಂಗಮವ ಪೂಜಿಸಬೇಕು" ಎಂದಿದೆ, "ಸ್ವಾಮಿಭೃತ್ಯ ಸಂಬಂಧವು ಎಂತಯ್ಯ ಪೂರೈಸದು" ಎಂದಿದೆ. ವಿಹಾರಿ ಎಂಬವರು ಸಂಪಾದಿಸಿದ "ಬಸವಣ್ಣನವರ ವಚನ" ಎಂಬ ಪ್ರತಿಯಲ್ಲಿ "................ಲಿಂಗಜಂಗಮವ" ಎಂತಲೇ ಇದೆ ಆದರೆ ಶ್ರೀ ಹರಳೆಣ್ಣೆಯವರ ಮೂಲದಲ್ಲಿ "...............ಲಿಂಗಜಂಗಮ" ಎಂದಿದೆಯೆಂತೆ! ಆ ಮೂಲ ಯಾವುದೋ ಸ್ಪಷ್ಟಪಡಿಸಿಲ್ಲ.

"ಭಕ್ತನಾಗಿ ತನ್ನ ಪೂಜಿಸಿಕೊಂಬುದು ಎಂತಯ್ಯಾ" ಎಂಬಲ್ಲಿ" ....ತನ್ನ ತಾ" ಎಂದಿದೆಯೆಂದು ಸೂಚಿಸುತ್ತಾರೆ. 'ತಾ' ಬಿಟ್ಟು ಹೋಗಿರುವುದು ಮುದ್ರಣದೋಷ. ಆದರೆ ಅಷ್ಟರಿಂದ ಅರ್ಥವೇನೂ ವ್ಯತ್ಯಾಸವಾಗುವುದಿಲ್ಲ. ಅಥವಾ ಬೇರೆ ಅರ್ಥವನ್ನು ಮಾಡಲಿಕ್ಕೋಸ್ಕರ ಉದ್ದೇಶಪೂರ್ವಕವಾಗಿ 'ತಾ' ಅಕ್ಷರವನ್ನು ತೆಗೆದೂಹಾಕಿಲ್ಲ. ಪರರ ದೋಷವನ್ನು ಎತ್ತಿ ತೋರಿಸಲು

ಮುಂದಾಗಿರುವ ಇವರು "ಲಿಂಗಜಂಗಮವ" ಎನ್ನುವಲ್ಲಿ "ಮೂಲದಲ್ಲಿ ಲಿಂಗ-ಜಂಗಮ ಎಂದಿದೆ ಎಂದು ಬರೆದು ಕೊನೆಯ "ವ" ಕಾರವನ್ನು ತೆಗೆದು ಹಾಕಿ ತಾವೇ ದೋಷಿಗಳಾಗಿದ್ದಾರೆ.

ಈ ವಚನಕ್ಕೆ ಅಪಾರ್ಥಮಾಡಿರುವವರು ಶ್ರೀ ಹರಳೆಣ್ಣೆಯವರೇ ಹೊರತು ನಾವಲ್ಲ, ಅದನ್ನು ಈ ಕೆಳಗೆ ಸ್ಪಷ್ಟಪಡಿಸುತ್ತಿದ್ದೇವೆ:—

ಮೈಸೂರಿನ ಕೈಬರಹದ ಪ್ರತಿಯಲ್ಲಿ ಈ ವಚನಕ್ಕೆ ಟೀಕೆ ಈ ಪ್ರಕಾರ ವಾಗಿದೆ:—

"ಭಕ್ತನಾಗಿ ಲಿಂಗಜಂಗಮವ ಪೂಜಿಸಬೇಕು=ಭಕ್ತನಾಗಿ=ಶಿವಭಕ್ತನಾಗಿ, ಲಿಂಗಜಂಗಮವ ಪೂಜಿಸಬೇಕು=ಲಿಂಗಪೂಜೆ ಜಂಗಮದಾಸೋಹವ ಮಾಡ ಬೇಕು. ಭಕ್ತನಾಗಿ=ಶಿವಭಕ್ತನಾಗಿ ತಂನತಾ ಪೂಜಿಸಿಕೊಂಬುದು ಯೆಂತ್ತೈಯ್ಯಾ =ತನ್ನ ತಾನೂ ಆರಾಧಿಸಿಕೊಂಬುವುದು ಯೆಂತ್ತೈಯ್ಯಾ ಹ್ಯಾಂಗೈಯ್ಯಾ ಸ್ವಾಮಿ ಭೃತ್ಯ ಸಂಬಂಧವು ಯೆಂತ್ತೈಯ್ಯಾ=ಗುರು ಲಿಂಗ ಜಂಗಮವೇ ಕರ್ತೃ, ತಾನೆ ಭೃತ್ಯನಾಗಿರುವಂಥ ಸಂಬಂಧ ಸ್ವಾಯುತವು ಯೆಂತ್ತೈಯ್ಯಾ ........."

ಇನ್ನು 'ವಿಹಾರಿ' ಯವರು ತಾವು ಸಂಗ್ರಹಿಸಿರುವ "ಬಸವಣ್ಣನವರ ವಚನಗಳು" ಎಂಬ ಗ್ರಂಥದಲ್ಲಿ ಈ ವಚನಕ್ಕೆ ಹೀಗೆ ಟೀಕೆ ಬರೆಯುತ್ತಾರೆ:—

"ಭಕ್ತನಾಗಿದ್ದವನು ಲಿಂಗಜಂಗಮರ ಸೇವೆ ಮಾಡಬೇಕಲ್ಲದೆ, ತಾನೇ ತನ್ನ ಪೂಜೆಯನ್ನು ಜನರಿಂದ ಮಾಡಿಸಿಕೊಳ್ಳಬಾರದು. ಹೀಗಾದರೆ ಆಳು ಒಡೆಯರ ಸಂಬಂಧವು ಹೇಗುಂಟಾಗುವುದು? ಅದು ಕಣ್ಣಿಗೆ ಅರಿವೆ ಬಿಗಿದು ಮುಂದೆ ಕನ್ನಡಿ ಹಿಡಿದು ಮುಖನೋಡಿಕೋ ಎಂದು ಹೇಳಿದ ಅಪಹಾಸ್ಯದ ಮಾತಿನಂತಾಗುವುದು ಕೂಡಲಸಂಗಮದೇವಾ."

ಹೀಗೆ ಬಸವಣ್ಣನವರು ಹಸುಮಕ್ಕಳಿಗೂ ತಿಳಿಯುವಂತೆ ಸುಲಭ ಶಬ್ದ ಗಳಿಂದ ಪೂಜ್ಯವಾದ ಜಂಗಮವನ್ನು ಭಕ್ತನು ಪೂಜಿಸಬೇಕೆಂತಲೂ ತಾನು ಜಂಗಮದಂತೆ ಪೂಜೆಗೊಳ್ಳಬಾರದೆಂತಲೂ, ಹಾಗೆ ಒಂದುವೇಳೆ ಭಕ್ತನು ಪೂಜೆಗೊಂಡರೆ ಪೂಜ್ಯನಾರು? ಪೂಜಕನಾರು? ಎಂಬ ಸಂಬಂಧವು ಕೆಟ್ಟು ಹೋಗುತ್ತದೆಂದೂ ಸ್ಪಷ್ಟಪಡಿಸಿದ್ದಾರೆ. ಈ ವಚನವು ಅತಿ ಸ್ಪಷ್ಟವಾಗಿದ್ದರೂ

ಶ್ರೀ ಹರಳಿಣ್ಣಿಯವರು ಜಂಗಮರೂ ಸಹ ಭಕ್ತರಾಗಿ ಲಿಂಗಪೂಜೆ ಮಾಡ ಬೇಕು. ಮುಂತಾಗಿ ದ್ರಾವಿಡಪ್ರಾಣಾಯಾಮಮಾಡಲು ಹೊರಟಿದ್ದಾರೆ. ಗುರುಗಳು ಮತ್ತೊಬ್ಬ ಗುರುಗಳನ್ನು ಪೂಜಿಸುವಾಗ ಪರಸ್ಪರ ಒಬ್ಬರೊಬ್ಬರು ಸಮಾನಸ್ಕಂದರೆಂದು ತಿಳಿದು ಸಮರಸ ಮಾಡಿಕೊಳ್ಳುವರೇ ಹೊರತು, ಪೂಜೆಗೊಂಬುವವರು ಜಂಗಮರು, ಪೂಜಿಸುವವರು ಭಕ್ತರು ಎಂದು ತಿಳಿದುಕೊಳ್ಳುವುದಿಲ್ಲ. ಆದುದರಿಂದ ಈ ವಚನವು ಕೇವಲ ಭಕ್ತನು ಮಾಹೇಶ್ವರ (ಜಂಗಮ) ನನ್ನು ಹೇಗೆ ಪೂಜಿಸಬೇಕು ಎಂಬುವನ್ನು ಸ್ಪಷ್ಟಪಡಿಸಲು ಮಾತ್ರ ಉಕ್ತವಾಗಿದೆಯೇ ಹೊರತು, ಜಂಗಮರನ್ನು ಭಕ್ತರನ್ನಾಗಿಮಾಡಿ, ಭಕ್ತರನ್ನು ಜಂಗಮರನ್ನಾಗಿಮಾಡಿ ಪೂಜಿಸುವುದಕ್ಕೆ ಹಚ್ಚಿ ಪ್ರಾಚೀನ ಸಾಂಪ್ರದಾಯವನ್ನು ಕೆಡಿಸಲಿಕ್ಕಲ್ಲ. ಆದುದರಿಂದ ಭಕ್ತನು ತನ್ನ ತಾನು ಪೂಜಿಸಿಕೊಳ್ಳಬಾರದು ಎಂಬುದೇ ಬಸವಣ್ಣನವರ ಸತ್ಯಶಾಸನವೆಂಬುದು ಸ್ಪಷ್ಟವಾಗುತ್ತದೆ.

ಹೀಗೆ ಭಕ್ತ ಮಾಹೇಶ್ವರರೆಂಬ ಎರಡು ವಂಶಗಳು ವೀರಶೈವ ಮತಾರಂಭಕಾಲದಿಂದ ಬಸವಣ್ಣನವರ ಕಾಲದವರೆಗೆ, ಅಲ್ಲಿಂದ ಇಲ್ಲಿಯವರೆಗೆ ಅಚ್ಚಳಿಯದೆ ಸಾಗಿಬಂದಿವೆ. ಈ ವಿಚಾರವನ್ನು ಮಹಾಮಹಿಮರಾದ ಮುಳುಗುಂದದ ಬಾಲಲೀಲಾ ಮಹಾಂತಸ್ವಾಮಿಗಳು ಸಹ "ಜಯಮಂಗಲಂ ನಿತ್ಯ ಶುಭಮಂಗಲಂ" ಎಂಬ ತಮ್ಮ ಒಂದು ಪದ್ಯದಲ್ಲಿ "ಧರೆಯ ಭಕ್ತರು ಮಹೇಶ್ವರರುಗಳ ಪುತ್ರನಿಗೆ। ಶರಣು ಬಸವಾದಿಪ್ರಮಥರ ಕಂದಗೆ" ಎಂದು ಭಕ್ತಮಾಹೇಶ್ವರ ಎಂಬ ಎರಡು ವರ್ಗಗಳು ಪ್ರತ್ಯೇಕವಾಗಿರುವುದನ್ನು ಸೂಚಿಸಿದ್ದಾರೆ. ಈಗಲೂ ಶುಭ ಶೋಭನಾದಿ ಕಾರ್ಯಗಳಲ್ಲಿ "ಭಕ್ತಮಾಹೇಶ್ವರರು ಬಂದರೇನು?" ಎಂದು ಕರೆಯುವ ರೂಢಿಯು ಸ್ಪಷ್ಟವಾಗಿದೆ. ಅಲ್ಲದೆ ವಂಶಪರಂಪರೆಯಿಂದ ನಡೆದುಕೊಂಡು ಬಂದ ಗುರುಸ್ಥಲಪೀಠದ ಮಾಹೇಶ್ವರರು ( ಜಂಗಮರು ) ಅಖಂಡ ಭರತಖಂಡದಲ್ಲಿ ಇಲ್ಲಿಯವರೆಗೂ ಜೀವಿಸಿಕೊಂಡಿದ್ದಾರೆ.

ಆದರೆ ಇತ್ತೀಚೆಗೆ ಮಾಹೇಶ್ವರ (ಜಂಗಮ)ರ ಗೌರವ ಪೂಜೆ ನೋಡಿ ಸಹಿಸಲಾರದ ಹಲವರು ತಾವೂ ಜಂಗಮರಾಗಲು ಹೊರಟು ಮೂಲಜಂಗ

ಮತ ಶಾಶ್ವತ ಅಧಿಕಾರಗಳನ್ನು ಅಲ್ಲಗಳೆಯಲು ಪ್ರವೃತ್ತರಾಗಿ ಬಸವಾದಿ ಶಿವಶರಣರ ವಚನಗಳಿಗೆ ಮನಬಂದಂತೆ ಅಪಾರ್ಥವನ್ನು ಮಾಡಲಿಕ್ಕೆ ಹತ್ತಿದ್ದಾರೆ. ಹೀಗೆ ಮಾಡುವುದು ಜಂಗಮರ ಮೇಲಿನ ದ್ವೇಷಬುದ್ಧಿಯಿಂದ ಎಂಬುದು ಸ್ಪಷ್ಟವಾಗಿ ಒಡೆದುಕಾಣುತ್ತದೆ. ಅದಕ್ಕಾಗಿಯೇ ಜನತೆಯು ಮೋಸಹೋಗಬಾರದೆಂದು ಬಸವಾದಿ ಶಿವಶರಣರ ಸತ್ಯಹೃದಯವನ್ನು ಲೋಕಾರಾಧ್ಯ ಬಸವಣ್ಣ ಗ್ರಂಥವು ಹೊರಗಿಟ್ಟಿದೆ. ಮಾಹೇಶ್ವರ (ಜಂಗಮ) ಪ್ರೇಮಿಗಳು ಇದನ್ನು ಮಾನ್ಯಮಾಡುತ್ತಾರೆ. ಮಾಹೇಶ್ವರ (ಜಂಗಮ) ದ್ವೇಷಿಗಳು ದೂಷಿಸುತ್ತಾರೆ, ಎಂಬುದು ನಿರಕ್ಷರಕುಕ್ಷಿಗೂ ಗೊತ್ತಾಗುತ್ತದೆ.

ಬಸವಣ್ಣನವರ ಜಂಗಮಭಕ್ತಿಯು ಅವರ್ಣನೀಯವಾದುದು. ಮಹಿಮರಾದ ಜಂಗಮರ ಆನಂದವೇ ಅವರ ಆನಂದವಾಗಿತ್ತು. ಅವರು ತಮ್ಮ ವಚನವೊಂದರಲ್ಲಿ ಜಂಗಮಭಕ್ತಿಯನ್ನು ಹೀಗೆ ಪ್ರಕಟಿಸಿದ್ದಾರೆ:—

"ಕನ್ನಡಿಯ ನೋಡುವ ಅಣ್ಣಗಳಿರಾ!
ಜಂಗಮವ ನೋಡಿರೇ!
ಜಂಗಮನೊಳಗೆ ಲಿಂಗಯ್ಯ ಸನ್ನಿಹಿತನಾಗಿರ್ಪ
ಸ್ಥಾವರ ಜಂಗಮ ಒಂದೇ ಎಂದುದು ಕೂಡಲ ಸಂಗನ ವಚನ

ಎಂದು ಇಷ್ಟಲಿಂಗಕ್ಕೆ ಸರಿಸಮಾನವಾಗಿಯೇ ಜಂಗಮವನ್ನು ಪೂಜಿಸಬೇಕೆಂದು ಸ್ಪಷ್ಟಪಡಿಸಿರುತ್ತಾರೆ.

ಇನ್ನು ಶ್ರೀ ಹರಳೆಣ್ಣೆಯವರು "ಲೋಕಾರಾಧ್ಯ ಬಸವಣ್ಣ" ಗ್ರಂಥದಲ್ಲಿ ನಾವು ಬರೆದಿರುವ "ಜಂಗಮ ಲಿಂಗೈಕ ಭಕ್ತರಾದ ಬಸವಣ್ಣನವರು ಏಳು ಭವಾಂತರಗಳಲ್ಲಿ ತಾವು ಭಕ್ತರಾಗಿಯೇ ಜನಿಸಿದೆವೆಂದು ತಮ್ಮ ವಚನಗಳಲ್ಲಿ ಹೇಳಿಕೊಂಡಿದ್ದಾರೆ" ಎಂಬ ವಾಕ್ಯದ ಮೇಲೆ "ಬಸವಣ್ಣನವರು ಶಿವಭಕ್ತರೆಂದು ಹೇಳಿಕೊಂಡಿದ್ದಾರೆಯೇ ವಿನಾ ಭಕ್ತರೆಂದು ಹೇಳಿಕೊಂಡಿಲ್ಲ" ಎಂದು ಆಕ್ಷೇಪಿಸಿದ್ದಾರೆ. ಇವರು "ಲೋಕಾರಾಧ್ಯಬಸವಣ್ಣ" ಗ್ರಂಥದ ೧೨ ನೇ ಪುಟ ೨ನೇ ಪ್ಯಾರಾವನ್ನು ಓದಿದ್ದರೆ ಇವರ ಆಕ್ಷೇಪಣೆಗೆ ಅಲ್ಲಿಯೇ ಉತ್ತರ ಸಿಕ್ಕುತಿತ್ತು. ನಾವು, ಬಸವಣ್ಣನವರು ಹೀಗೆ ಹೇಳಿದರೆಂದು ಸಾರಾಂಶವನ್ನು ಬರೆದೆವೇ ವಿನಾ ಆ ವಚನವನ್ನು ಇದ್ದಕ್ಕಿದ್ದಂತೆ ಉದ್ಧರಿಸಿ ಬರೆದಿಲ್ಲ.

ಇಷ್ಟನ್ನೇ ಶ್ರೀ ಹವಳೆಣ್ಣೆಯವರು ದೊಡ್ಡ ಗುಡ್ಡದಷ್ಟು ಮಾಡಿ ಬರೆದಿರುತ್ತಾರೆ. ಲೋಕಾರಾಧ್ಯಬಸವಣ್ಣ ಗ್ರಂಥದ ಪುಟ ೧೮ ಪ್ಯಾರಾ ೨ರಲ್ಲಿ "ಬಸವಾವತಾರವನ್ನು ಸೇರಿ ಏಳುಸಾರೆ ಭವಾಂತರದಲ್ಲಿ ಶಿವಭಕ್ತನಾಗಿ ಬಂದೆನೆಂದು ನುಡಿದ ಬಸವಣ್ಣನವರ ವಚನದಲ್ಲಿ" ಎಂದಿದೆ. ಭಕ್ತ, ಶಿವಭಕ್ತ ಶಬ್ದಗಳು ಒಂದೇ ಅರ್ಥವನ್ನು ಕೊಡುತ್ತವೆ. ವೀರಶೈವಮತದ ಭಕ್ತರು ಶಿವಭಕ್ತರಾಗಿ ರುವರೇ ವಿನಾ ಹರಿಭಕ್ತರಾಗಿರುವುದಿಲ್ಲ. ವ್ಯವಹಾರದಲ್ಲಿ ಭಕ್ತಶಬ್ದವನ್ನೇ ಹೆಚ್ಚಾಗಿ ಬಳಕೆ ಮಾಡುತ್ತಾರೆ. ಭಕ್ತರನ್ನು ಕರೆಯಿರಿ! ಭಕ್ತಮಾಹೇಶ್ವರರನ್ನು ಕರೆಯಿರಿ!! ಮಾಹೇಶ್ವರ ಶಬ್ದಕ್ಕೆ ಬದಲಾಗಿ ಜಂಗಮರನ್ನು ಕರೆಯಿರಿ! ಅಯ್ಯನವರನ್ನು ಕರೆಯಿರಿ! ಎಂಬ ಪ್ರಚಾರದಲ್ಲಿದೆ ಆದುದರಿಂದ ಬಳಕೆಯಲ್ಲಿರುವ ಮತ್ತು ಒಂದೇ ಅರ್ಥದಲ್ಲಿರುವ ಭಕ್ತಶಬ್ದವನ್ನು ನಾವು ಉಪಯೋಗಿಸಿದ್ದೇವೆಯೋ ವಿನಾ ಬಸವಣ್ಣನವರು ಶಿವಭಕ್ತರಲ್ಲವೆಂದು ಉಪಯೋಗಿಸಲು ಪ್ರಯತ್ನಿಸಿಲ್ಲ.

ವೀರಶೈವ ಶಾಸ್ತ್ರದಲ್ಲಿ ಶಿವಭಕ್ತ ಶಬ್ದವೂ ಭಕ್ತ ಶಬ್ದವೂ ಒಂದೇ ಅರ್ಥವನ್ನು ಕೊಡುತ್ತವೆಂಬ ಬಗೆಗೆ ಈ ಕೆಳಗೆ ಆಧಾರಗಳನ್ನು ವಿವರಿಸುತ್ತಿದ್ದೇವೆ:—

"ವಂಶಾವಳಿಪ್ರಯಾತಾನಾಂ ಲಿಂಗಧಾರಣಶಾಲಿನಾಂ।
ಜ್ಞಾನಿನಾಂ ಶಿವಭಕ್ತಾನಾಂ ಶೂದ್ರತ್ವಂ ನೈವ ವಿದ್ಯತೆ ॥೨೩॥
(ವೀರಶೈವ ಸದಾಚಾರಸಂಗ್ರಹ ಪ್ರಕರಣ ೭)

ವಂಶಪರಂಪರಾಗತವಾಗಿ ಬಂದಿರುವ ಶಿವಲಿಂಗಧಾರಿಗಳೂ, ಜ್ಞಾನಿಗಳೂ ಆದ ಶಿವಭಕ್ತರಿಗೆ ಶೂದ್ರತ್ವವಿಲ್ಲವೆಂದು ತಿಳಿಸುವ ಈ ಪದ್ಯದಲ್ಲಿ ಶಿವಭಕ್ತ ಶಬ್ದ ಬಂದಿದೆ.

"ವೀರಶೈವಾಭಿದಾ ದೀಕ್ಷಾ, ವೀರಮಾಹೇಶ್ವರಾಭಿದಾ।
ಏವಂ ಹಿ ಭಿದ್ಯತೇ ದೀಕ್ಷಾ, ಭಕ್ತಮಾಹೇಶ್ವರೇಷು ಚ ॥೪೮॥
(ವೀರಶೈವ ಸದಾಚಾರಸಂಗ್ರಹ ಪ್ರಕರಣ ೧೧)

ದೀಕ್ಷೆಯು ವೀರಶೈವ ದೀಕ್ಷೆಯೆಂತಲೂ ವೀರಮಾಹೇಶ್ವರ ದೀಕ್ಷೆಯೆಂತಲೂ ಎರಡು ಬಗೆಯಾಗಿದ್ದು ಭಕ್ತರಿಗೆ ವೀರಶೈವದೀಕ್ಷೆಯನ್ನೂ, ಜಂಗಮರಿಗೆ ಮಾಹೇಶ್ವರ ದೀಕ್ಷೆಯನ್ನೂ ಮಾಡಬೇಕು, ಎಂದು ಈ ಪದ್ಯ

ವಲ್ಲಿ ಶಿವಭಕ್ತ ಶಬ್ದಕ್ಕೆ ಬದಲಾಗಿ ಕೇವಲ ಭಕ್ತ ಶಬ್ದವೇ ಉಪಯೋಗಿಸಲ್ಪಟ್ಟಿದೆ. ಆದುದರಿಂದ ವೀರಶೈವಶಾಸ್ತ್ರರೀತ್ಯಾ ಭಕ್ತ ಶಬ್ದವೂ ಶಿವಭಕ್ತ ಶಬ್ದವೂ ಒಂದೇ ಅರ್ಥವನ್ನು ಕೊಡುತ್ತವೆಂದು ತಿಳಿದುಕೊಳ್ಳಬೇಕು.

ಇನ್ನು ಶ್ರೀ ಪರಳೆಣ್ಣೆಯವರು "ಧೃತಿಗೆಟ್ಟು ಅನ್ಯರಬೇಡದಂತೆ" ಎಂಬ ಬಸವಣ್ಣನವರ ವಚನದಮೇಲೆ ತಮ್ಮದೇಆದ ಶೈಲಿಯಲ್ಲಿ ಅರ್ಥಮಾಡಿಕೊಂಡು ಮತ್ತೆ ಪಾಠಾಂತರದ ಹುಯಿಲೆಬ್ಬಿಸಲು ಪ್ರಯತ್ನಿಸಿದ್ದಾರೆ. ಇವರು ಪದೇ ಪದೇ ಉದಾಹರಿಸುತ್ತಿರುವ "ಮೂಲ" ಎಲ್ಲಿಯದೋ? ಸ್ಪಷ್ಟಪಡಿಸಿಲ್ಲ. "ಪರಸತಿಯರ ರತಿಗೆ ಮನಹಾಕದಂತೆ" ಎಂದಿರುವಲ್ಲಿ, ಮೂಲದಲ್ಲಿ "ಮನ ಹಾರ" ಎಂದಿದೆ, ಎಂದು ಬರೆದಿರುತ್ತಾರೆ. ಶ್ರೀ 'ವಿಹಾರಿ' ಅವರು ಸಂಗ್ರಹಿಸಿರುವ "ಬಸವಣ್ಣನವರ ವಚನಗಳು" ಎಂಬ ಗ್ರಂಥದಲ್ಲಿ "ಮನಹಾಕದಂತೆ" ಎಂದೇ ಇದೆ. ಮನಹಾಕುವುದೂ ಮತ್ತು ಮನ ಹಾರುವುದು ಎರಡೂ ಮನಸ್ಸಿನ ಒಂದೇ ಕ್ರಿಯೆಯನ್ನು ವ್ಯಕ್ತಪಡಿಸುತ್ತವೆ. ಆದುದರಿಂದ ಶ್ರೀ ಪರಳೆಣ್ಣೆಯವರು ವೃಥಾ ಗಾಳಿ ಗುದ್ದಿ ಕೈ ನೋವು ಮಾಡಿಕೊಳ್ಳುವ ಸಾಹಸಕ್ಕಿಳಿದಿದ್ದಾರೆ. ಇದೇ ವಚನದಲ್ಲಿ "ಅನ್ಯಜಾತಿಯ ಸಂಗಮ" ಎಂಬಲ್ಲಿ ಮೂಲದಲ್ಲಿ "ಸಂಗವ" ಎಂದಿದೆ, ಎಂದು ಆಕ್ಷೇಪಿಸಿದ್ದಾರೆ, ನಮ್ಮ ಕೃತಿಯಲ್ಲಿ 'ವ' ಕಾರಕ್ಕೆ ಬದಲಾಗಿ 'ಮ' ಕಾರ ಬಿದ್ದಿರುವುದು ಅಚ್ಚುದೋಷ. ಆದರೆ ಅರ್ಥಮಾತ್ರ ಎರಡಕ್ಕೂ ಒಂದೇ ಆಗುತ್ತದೆ. "ಅನ್ಯಜಾತಿಯ ಸಂಗವ ಮಾಡದಂತೆ" ಎಂಬಲ್ಲಿ 'ಸಂಗ' ಶಬ್ದವು ರಕ್ತಸಂಬಂಧದ ಸಮರಸಾರ್ಥವನ್ನೇ ಕೊಡುತ್ತದೆ.

"ದುರ್ಜನರ ಸಂಗವಂ ತ್ಯಜಿಸು ಮನವೇ।
ಸಾದು ಸಜ್ಜನರ ಸಂಗದೊಳು ಸುಖಿಯಾಗೆಲವೊ॥"

ಎಂಬಲ್ಲಿ ಬಂದಿರುವ 'ಸಂಗ' ಶಬ್ದವು **ಸಹವಾಸ** ಎಂಬ ಅರ್ಥದಲ್ಲಿದೆಯೇ ಹೊರತು ರಕ್ತಸಂಬಂಧ ಎಂಬ ಅರ್ಥದಲ್ಲಿಲ್ಲ. ಆದರೆ ಮೇಲೆ ಬಂದಿರುವ "ಅನ್ಯಜಾತಿಯ ಸಂಗವ" ಎಂಬಲ್ಲಿ ಮಾತ್ರ 'ಸಂಗ,' ಜಾತಿಸಂಬಂಧವಾದುದಾಗಿರುವುದರಿಂದ ರಕ್ತಸಂಬಂಧ ಎಂತಲೇ ಅರ್ಥವಾಗುತ್ತದೆ. ಆದುದರಿಂದ ವ್ಯಾಪಕಾರ್ಥವುಳ್ಳ 'ಸಂಗ' ಶಬ್ದದ ಅರ್ಥವನ್ನು ಸಂದರ್ಭೋ-

ಚಿತವಾಗಿ ಮಾಡಿಕೊಳ್ಳಬೇಕು. "ಅನ್ಯಜಾತಿಯ ಸಂಗವ" ಎಂಬ ಶಬ್ದ ಪಂಕ್ತಿಯು "ಬೇರೆ ಜಾತಿಯವರ ಶರೀರ ಸಂಬಂಧವ ಅಂದರೆ ರಕ್ತಸಂಬಂಧವ" ಎಂಬ ಅರ್ಥವನ್ನು ಸ್ಪಷ್ಟವಾಗಿ ಕೊಡುತ್ತದೆ. ಅಂತಹ ಅನ್ಯಜಾತಿಯೊಡನೆ ಸಾಂಕರ್ಯವನ್ನು ಮಾಡಬಾರದೆಂಬುದೇ ಬಸವಣ್ಣನವರ ಸ್ಪಷ್ಟಾಭಿಪ್ರಾಯ ವಾಗಿತ್ತೆಂದು ತಿಳಿದುಕೊಳ್ಳಬೇಕು. ಯಾವುದೊಂದು ಶಾಸ್ತ್ರದಲ್ಲಿ ಅಥವಾ ವಚನದಲ್ಲಿ ಬರುವ ಆಧಾರಗಳು ಕೆಲವು ವಸ್ತುಪ್ರಶಂಸಾ ವಾಕ್ಯಗಳಾಗಿಯೂ, ಕೆಲವು ವಿಧಿವಾಕ್ಯಗಳಾಗಿಯೂ ಇರುತ್ತವೆಂಬುದನ್ನು ಜಾಣರಾದವರು ಅರಿಯಬೇಕು. "ಧೃತಿಗೆಟ್ಟು ಅನ್ಯರಬೇಡದಂತೆ" ಎಂಬ ಈ ವಚನವು ಶಾಸನಾತ್ಮಕವಾದ ವಿಧಿವಚನವಾಗಿದೆ. ಇದು ಕೇವಲ ಪ್ರಶಂಸಾತ್ಮಕ ವಾಗಿಲ್ಲ. ಇದರ ಅರ್ಥವನ್ನು ಇನ್ನೊಮ್ಮೆ ಸ್ಪಷ್ಟಗೊಳಿಸುವುದು ಯೋಗ್ಯ ವಾಗಿದೆ. "ಎಂತಹ ಬಡತನ ಬಂದರೂ ಎದೆಗುಂದಿ ಸಿಕ್ಕಸಿಕ್ಕವರನ್ನು ಯಾಚಿಸಬಾರದು. ಅಲ್ಪಸ್ವಾರ್ಥಕ್ಕಾಗಿ ಪರರನ್ನು ಪರಮಾತ್ಮನೋ ಎಂಬಂತೆ ಮತಿಗೆಟ್ಟು ಹೊಗಳಬಾರದು. ಪರಸ್ತ್ರೀಯರನ್ನು ಮೋಹಿಸ ಬಾರದು ಶಿವಭಕ್ತರಿಗೆ ಹೊರತಾದವರ ಕೂಡ ಒಡನಾಡಬಾರದು. ಅಂದರೆ ಊಟ, ಸಹವಾಸ ಮುಂತಾದವುಗಳನ್ನು ಮಾಡಬಾರದು. ತಾನು ಯಾವ ಜಾತಿಯಲ್ಲಿ ಹುಟ್ಟಿರುವನೋ ಆ ಜಾತಿಯನ್ನು ಬಿಟ್ಟು ಬೇರೆ ಜಾತಿಯವ ರೊಡನೆ ರಕ್ತಸಂಬಂಧ ಮಾಡಬಾರದು" ಎಂಬುದೇ ಈ ವಚನದ ಸ್ಪಷ್ಟಾರ್ಥ ವಾಗಿದೆ. ಶಿವಾಗಮವೂ ಕೂಡ ಜಾತಿಮರ್ಯಾದೆಯನ್ನು ಮೀರಿ ನಡೆ ಯುವವನು ಚಾಂಡಾಲನೆಂದು ಹೇಳಿದೆ. ಇದು ಶಿವಾಗಮ ವಾಕ್ಯವೇ ಹೊರತು ನಮ್ಮ ಕಲ್ಪನೆಯೇನೂ ಅಲ್ಲ.

## ಸತ್ಯನಾಥನ ಕಥೆಯಲ್ಲಿ ಇತಿಹಾಸವಿದೆ

ಸತ್ಯನಾಥನ ಕಥಾವಿಚಾರ "ಕಾಲ್ಪನಿಕ ಕಟ್ಟುಕಥೆ" ಎಂದೂ, ಈ ಕಥೆಯು "ವೀರಶೈವಮಾರ್ಗಕ್ಕೆ ವಿರೋಧವಾದುದು" ಎಂದೂ ಶ್ರೀ ಹರಳಿ ಣ್ಣಯವರು ಆಕ್ಷೇಪಿಸಿದ್ದಾರೆ. "ಇತಿಹಾಸದೃಷ್ಟಿಯಿಂದಲೂ, ಸಾಹಿತ್ಯದೃಷ್ಟಿ ಯಿಂದಲೂ ಉತ್ತಮ ವರ್ಗಕ್ಕೆ ಸೇರಿದ ಪುರಾಣವೆಂದು" (ಶ್ರೀ ಎಚ್. ದೇವೀರಪ್ಪ) ಪರಿಗಣಿಸಲ್ಪಟ್ಟಿರುವ ಸಿಂಗಿರಾಜಕೃತ ಅಮಲಬಸವ ಚಾರಿತ್ರ್ಯ

ಕಾವ್ಯದಲ್ಲಿ ಈ ವಿಚಾರ ಬಂದಿರುವಾಗ ಅದು ಕಾಲ್ಪನಿಕ ಕಟ್ಟುಕಥೆ ಹೇಗಾಗುವುದು? ಇದಕ್ಕೆ ಪ್ರತಿಯಾಗಿ ಶ್ರೀ ಹರಳೆಣ್ಣೆಯವರು 'ಲೋಕಾರಾಧ್ಯ ಬಸವಣ್ಣ' ಗ್ರಂಥದ ಮೇಲೆ ಟೀಕಿಸಿ ಬರೆದಿರುವ ಪುಸ್ತಕವು ಆದಿಯಿಂದ ಅಂತ್ಯದವರೆಗೆ ಕಾಲ್ಪನಿಕ ಕುತರ್ಕ ವಿತರ್ಕಗಳಿಂದ ಕೂಡಿದೆ. ಇವರು ಎತ್ತಿಕೊಂಡಿರುವ "ಅನಾದಿ ಭಕ್ತರೂಪೇಣ ಭಗವಾನ್ ಪರಮಶ್ಶಿವಃ" ಎಂದು ಮುಂತಾದುದ್ದು ಯಾವ ಗ್ರಂಥದಲ್ಲಿದೆ? ಪುಟ ಸಂಖ್ಯೆ, ಶ್ಲೋಕ ಸಂಖ್ಯೆ ಎಷ್ಟು? ಇವಾವವೂ ಇಲ್ಲದೆ ನಿರಾಧಾರವಾಗಿ ಬರೆದಿರುತ್ತಾರೆ. ಈ ಶ್ಲೋಕವು ವೀರಶೈವ ಮಾರ್ಗಕ್ಕೆ ವಿರೋಧವಾಗಿಲ್ಲವೆ? ಅದು ಹೇಗೇ ಇರಲಿ ಇವರಿಗೆ ಅತ್ಯಾವಶ್ಯಕವಾಗಿ ಬೇಕಾಗಿರುವುವರಿಂದ ಅದನ್ನು ಅತ್ಯಂತ ಪ್ರೇಮದಿಂದ ಕೊನೆಯ ಪುಟದಲ್ಲಿ ಸೇರಿಸಿದ್ದಾರೆ. ಸಿಂಗಿರಾಜಪುರಾಣವನ್ನಾಗಲಿ ಅಥವಾ ಇತರ ಯಾವ ಬಸವ ಪುರಾಣಗಳನ್ನಾಗಲಿ ಶ್ರೀ ಹರಳೆಣ್ಣೆಯವರು ಓದಿದಂತೆ ಕಾಣುವುದಿಲ್ಲ. ಪುರಾಣಗಳು ಕಾಲ್ಪನಿಕ ಕಟ್ಟುಕಥೆಗಳೆಂದು ಭಾವಿಸಿರುವ ಇವರು ಅವುಗಳ ಅಧ್ಯಯನವನ್ನಾದರೂ ಏಕೆ ಮಾಡಲಿಕ್ಕೆ ಹೋದಾರು? ಸತ್ಯನಾಥನ ಚರಿತ್ರೆಯಂತಹ ಇನ್ನೂ ಅನೇಕ ಶರಣರ ಲೀಲಾವಿನೋದದ ಕಥಾಚರಿತ್ರೆಗಳು ಬಸವಪುರಾಣಗಳಲ್ಲಿ ತುಂಬಿವೆ. ಸತ್ಯನಾಥನ ಚರಿತ್ರೆಯಲ್ಲಿ ಪ್ರಧಾನವಾಗಿ ಅಂಗೀಕಾರಕ್ಕೆ ಯೋಗ್ಯವಾಗಿರುವುದು ಚರಿತ್ರಾತ್ಮಕವಾದ, ಕಲ್ಯಾಣದಲ್ಲಿ ಇಂದಿಗೂ ಪ್ರಸಿದ್ಧವಾಗಿರುವ ಘನಲಿಂಗಿರುದ್ರಮುನಿಗಳ ಮಹಾಮಹಾಂತಿನ ಮಠಕ್ಕೆ ಸಂಬಂಧಿಸಿದ ವಿಚಾರ. ಇಲ್ಲಿ, ಆ ಮಠಕ್ಕೆ, **ಪರಮಮಹತ್ತು ಪದವೆತ್ತ ಚರಲಿಂಗವು ಸದ್ಭಕ್ತ ಸಮುದಾಯವನ್ನು** ಕರೆಯಿಸಿ ಸತ್ಯನಾಥನ ಬಗ್ಗೆ ಬಸವಣ್ಣನವರನ್ನು ವಿಚಾರ ಮಾಡಿದರೆಂಬುದೂ, ಬಸವೇಶ್ವರನ ಕಾಲದಲ್ಲಿಯೂ ಧರ್ಮಶಾಸಕರಾದ ವೀರಶೈವ ಗುರುಗಳು ತಮ್ಮ ಕರ್ತವ್ಯವನ್ನು ಪಾಲಿಸುತ್ತಿದ್ದರೆಂಬುದೂ ಮುಖ್ಯವಾದುದು. ಶ್ರೀ ಹರಳೆಣ್ಣೆಯವರಿಗೆ ಇದೆಲ್ಲ ಬೇಕಾಗಿಲ್ಲ. ಅಲ್ಲಿ ಬಂದಿರುವ ವೇಶ್ಯಾಲಂಪಟತ್ವ ಮುಂತಾದವುಗಳೇ ಇವರಿಗೆ ಪ್ರಧಾನವಾಗಿ ಕಂಡಹಾಗೆ ತೋರುತ್ತದೆ. ಇತಿಹಾಸ ಸಂಶೋಧಕನು ತನ್ನ ದೃಷ್ಟಿಕೋನವನ್ನು ವಿಶಾಲಗೊಳಿಸಿ ಕಥೆಗಳಲ್ಲಿ ಬರುವ ಮುಖ್ಯ ಚರಿತ್ರಾಂಶವೇನು? ಎನ್ನುವುದನ್ನು ಕಂಡುಕೊಳ್ಳಬೇಕಾದುದು ಅತಿ ಮುಖ್ಯವಾಗಿದೆ.

ಮಹಾಮಹಿಮರಾದ ಬಸವಣ್ಣನವರು ಜಂಗಮರಲ್ಲಿಯೂ, ಶರಣರಲ್ಲಿಯೂ ಪ್ರಧಾನವಾಗಿ ಹುಡುಕಿಕೊಂಡುದು ಶಿವಸ್ವರೂಪವನ್ನು ಮಾತ್ರ. ಇನ್ನಾವುದಕ್ಕೂ ಅವರು ಪ್ರಾಧಾನ್ಯತೆಯನ್ನು ಕೊಡಲಿಲ್ಲ. ಉದಾಹರಣೆಗಾಗಿ ಬಸವಪುರಾಣದಿಂದ ಅಂತಹ ಇನ್ನೊಂದು ಕಥಾಚರಿತ್ರೆಯನ್ನು ಈ ಕೆಳಗೆ ವಿವರಿಸಿದ್ದೇವೆ.

ಒಂದುದಿನ ಬಸವಣ್ಣನವರು ಬಿಜ್ಜಳನ ಆಸ್ಥಾನದಿಂದ ತಮ್ಮ ಮನೆಗೆ ಹೋಗುವಾಗ ದಾರಿಯ ಒಂದು ಅಂಗಡಿಯಲ್ಲಿ ಒಬ್ಬ ಜಂಗಮರು ಕಜ್ಜಾಯವನ್ನು ತಿನ್ನುತ್ತಿರುತ್ತಾರೆ. ಬಸವಣ್ಣನವರು ಬರುತ್ತಿರುವುದು ಈ ಜಂಗಮರಿಗೆ ಗೊತ್ತಾಗಿ ತಾವು ಮೆಲ್ಲುತ್ತಿದ್ದ ಉಳಿದ ಕಜ್ಜಾಯವನ್ನು ಬಸವಣ್ಣನವರಿಗೆ ಕೊಡುತ್ತಾರೆ. ಸದಾ ಸಿದ್ಧಾವಸ್ಥೆಯಲ್ಲಿದ್ದ ಬಸವಣ್ಣನವರು ಜಂಗಮರು ಏನು ಅಪ್ಪಣೆಕೊಡಿಸಿದರೂ ಹಸಾದು ಎಂದು ಅಂಗೀಕರಿಸುವ ಸ್ವಭಾವದವರಾಗಿದ್ದುದರಿಂದ ಅವರು ಮಹಾಪ್ರಸಾದವೆಂದು ಆಗಲೇ ಅಲ್ಲಿಯೇ ಅದನ್ನು ಸ್ವೀಕಾರಮಾಡಿಬಿಡುತ್ತಾರೆ.—

"ವಸುಮತೀಶ್ವರನಖಿಳಪರಿವಾ।
ರ ಸಹಿತಂ ವೈಹಾಳಿ ಗೈದುವ।
ವಸರದೊಳು ಒಂದೆವಸ ಜಂಗಮನೊರ್ಬನಂಗಡಿಯ॥
ಪಸರದಲ್ಲಿಯೆ ಕುಳ್ಳಿತಾರೋ।
ಗಿಸುತ ಕಜ್ಜಾಯವನೊಸೆದು ಕೊಡೆ।
ಬಸವನಾಗ ಮಹಾಪ್ರಸಾದವೆನುತ್ತ ಕೈಕೊಳಲು॥ ॥೯೦॥
(ಬಸವಪುರಾಣ ಸಂಧಿ ೫೬)

ಬೀದಿಯ ಅಂಗಡಿಯಲ್ಲಿ ಜಂಗಮರು ಕಜ್ಜಾಯವನ್ನು ತಿನ್ನುವುದೂ, ಅವರು ತಿಂದು ಕೊಟ್ಟುದನ್ನು ಬಸವಣ್ಣನವರು ದಾರಿಯಲ್ಲಿಯೇ ಮಹಾಪ್ರಸಾದವೆಂದು ಸ್ವೀಕರಿಸುವುದೂ ಶ್ರೀ ಹರಳಿಣ್ಣೆಯವರ ಅಭಿಪ್ರಾಯದಂತೆ ವೀರಶೈವ ಮಾರ್ಗಕ್ಕೆ ವಿರೋಧವಾಗಬಹುದಲ್ಲವೆ?

ಹೀಗೆ ಕಲ್ಯಾಣದಲ್ಲಿ ಶಿವಶರಣ ಸತ್ಯನಾಥನಂತೆ ಶಿವಲೀಲಾವಿನೋದಿಗಳಾದ ಅನೇಕ ಮಹಿಮರು ಆಗಿಹೋಗಿದ್ದಾರೆ. ಈ ಚರಿತ್ರೆಗಳಲ್ಲಿ ಜಂಗ

ಮಾರು, ಶರಣರು ಮತ್ತು ಬಸವಣ್ಣ ಇವರ ಮುಖ್ಯದಲ್ಲಿ ತೋರಿಬರುವುದು ಶಿವಸ್ವರೂಪ ಮತ್ತು ಸದ್ಭಕ್ತಿ. ಇವೇ ಬಸವಣ್ಣನವರಿಗೆ ಪ್ರಧಾನವಾಗಿ ಬೇಕಾದುವೆಂಬುದು ಸ್ಪಷ್ಟವಾಗುತ್ತದೆ. ಇಂತಹ ಕಥಾಚರಿತ್ರೆಗಳಿಂದ ನಾವು ಗ್ರಹಿಸಬೇಕಾದುದು ಚಾರಿತ್ರ್ಯಾಂಶವನ್ನು ಮಾತ್ರ.

ಶ್ರೀ ಹರಳೆಣ್ಣೆಯವರು ಸತ್ಯನಾಥನ ಚರಿತ್ರೆಯ ವಿಚಾರವನ್ನೆತ್ತಿ ಕೊಂಡು " ಇದು ಕಾಲ್ಪನಿಕವಾದುದಲ್ಲದೆ ಸುಳ್ಳು "ಎನ್ನುತ್ತಾರೆ. ಅಲ್ಲದೆ ಇವರ ಪಂಗಡದ ಪಟ್ಟದಯ್ಯನ ಉಲ್ಲೇಖವಲ್ಲಿರುವುದರಿಂದ'' ಮುಂತಾಗಿ ಮನಬಂದಂತೆ ಟೀಕಿಸಿದ್ದಾರೆ. ಇದರಿಂದಾಗಿ ಇವರು "ಪಟ್ಟದಯ್ಯ'' ಎಂಬ ಪದವನ್ನು ಆಕ್ರೋಶದಿಂದ ಬಳಸಿ ತಮ್ಮ ಜಂಗಮದ್ವೇಷ ಎಷ್ಟಿದೆಯೆನ್ನು ವುದನ್ನು ಹೊರಗೆಡಹಿದ್ದಾರೆ. ಸರಿಯೇ! ಆದರೆ ಅದರಂತೆ "ಅನಾದಿ ಭಕ್ತ ರೂಪೇಣ" ಎಂಬ ನಿರಾಧಾರ ಪದ್ಯದಲ್ಲಿ ತಮಗೆ ಬೇಕಾದ 'ಭಕ್ತ' ಎಂಬ ಶಬ್ದವು ಬಂದುದಕ್ಕಾಗಿಯೇ ಅಟ್ಟಹಾಸದಿಂದ ಅದನ್ನು ಪರಮ ಪ್ರಮಾಣ ವನ್ನಾಗಿ ತೆಗೆದುಕೊಂಡಿದ್ದಾರೆನ್ನಬಹುದಲ್ಲವೇ? ಪರರ ದೋಷಗಳನ್ನು ಎತ್ತಿ ತೋರಿಸಲು ಪ್ರಯತ್ನಮಾಡುವವರು ತಾವು ಮೊದಲು ನಿರ್ದೋಷಿಗಳಾಗಿರು ವುದು ಮೇಲು.

## ವೀರಶೈವ ಅನಾದಿ ಭಕ್ತರು

ಶ್ರೀ ಹರಳೆಣ್ಣೆಯವರು "ಅನಾದಿ ಭಕ್ತ ರೂಪೇಣ....'' ಎಂಬ ತಮ್ಮ ಅತಿ ಮೆಚ್ಚಿನ ನಿರಾಧಾರ ಶ್ಲೋಕಕ್ಕೆ ಶಿವನೇ ಭಕ್ತನಾಗಿ ಬಂದು, ಅವನೇ ಜಗದ್ಗುರುವಾಗಿ ವೀರಶೈವಕ್ಕೆ ಕಾರಣನಾಗಿರುವನೆಂದು ಅರ್ಥ ಬರೆದಿದ್ದಾರೆ. ಇಚ್ಛಾವಿಗ್ರಹಧಾರಿಯೂ, ಸರ್ವತಂತ್ರಸ್ವತಂತ್ರನೂ, ಜನನಮರಣ ರಹಿ ತನೂ ಆದ ಪರಮೇಶ್ವರನು ತನ್ನ ಇಚ್ಛೆಯಂತೆ ಯಾವ ರೂಪವನ್ನಾದರೂ ಧರಿಸಬಲ್ಲನು. ಕೇವಲ ಭಕ್ತರೂಪವನ್ನೇಕೆ? ಅರ್ಜುನನಿಗೆ ಒಲಿಯುವಾಗ ಬೇಡನ ರೂಪವನ್ನು ಧರಿಸಿರಲಿಲ್ಲವೇ? ಆದರೆ ಅವನು ಯಾವ ರೂಪವನ್ನು ಧರಿಸಿಕೊಂಡು ಬಂದರೂ ಅದು ತಾತ್ಕಾಲಿಕವೇ ಹೊರತು ಜನ್ಮತಃ ಬಂದು ಪರಂಪರೆಯಾಗಿ ಉಳಿಯುವುದಿಲ್ಲ. ಜಗದೋದ್ಧಾರಕ್ಕೆ ಜಗದ್ಗುರುವಾಗಿಯೂ

ಕಾಣಿಸಿಕೊಳ್ಳಬಲ್ಲ. ಆದರೆ ಶಿವನು ಭಕ್ತನಾಗಿ ಇಂತಹವರ ಹೊಟ್ಟೆಯಲ್ಲಿ ಹುಟ್ಟಿ ಅಥವಾ ಅವತಾರಪೆತ್ತಿ ಎಲ್ಲ ಜಂಗಮರಿಗೆ ತೀರ್ಥಪ್ರಸಾದವನ್ನು ಕೊಟ್ಟನೆಂದು ಎಲ್ಲಿಯೂ ಹೇಳಿಲ್ಲ.

ಶ್ರೀ ಹರಳಿಣ್ಣಿಯವರು ಮುಂದುವರಿದು "ಬಸವಣ್ಣನೇ ಆ ಅನಾದಿ ಭಕ್ತ" ಎಂದು ಬರೆದಿದ್ದಾರೆ. ಆದರೆ ವೀರಶೈವ ಸಿದ್ಧಾಂತ ಪ್ರಕಾರ ಅನಾದಿ ಭಕ್ತರ ಉತ್ಪತ್ತಿಯು ಶಿವಾಗಮಗಳಲ್ಲಿ ಈ ಕೆಳಗಿನಂತೆ ವಿವರಿಸಲ್ಪಟ್ಟಿದೆ:—

"ಪಂಚಮಾ ವೀರಶೈವಾಸ್ತೇ ಮನ್ಮತೋದ್ಧಾರಹೇತವಃ।
ಮದ್ಭಕ್ತಾನಾಂ ತಯೇವಾದ್ಯಾ ವೀರಶೈವಾ ಇತೀರಿತಾಃ॥೫೦॥
ಶೈವಾಪ್ತದಿಶರೇ ಲೋಕಾಃ ಸತ್ಯಂ ಸತ್ಯಂ ನಗಾತ್ಮಜೇ॥ ॥೫೧॥

(ಸ್ವಯಂಭುವಾಗಮ)

ಎಂಬ ಶಿವೋಕ್ತಿಯಂತೆ ವೀರಶೈವಭಕ್ತರಲ್ಲಿ ವೀರಶೈವಮತೋದ್ಧಾರಕ್ಕೆ ಕಾರಣರಾದವರು ಪಂಚಮರು (ಮಖಾರಿ, ಕಾಲಾರಿ, ವೇದಾರಿ, ಸ್ಮರಾರಿ, ಪುರಾರಿ ಎಂಬವರು) ಅವರೇ ಭಕ್ತರಲ್ಲಿ ಆದ್ಯರು ಎಂದು ಸ್ಪಷ್ಟವಿರುವಾಗ ಅವರೇ ಅನಾದಿ ಭಕ್ತರೆನಿಸುವರು. ಈ ಅನಾದಿ ಭಕ್ತರ ಉದ್ಧಾರಕ್ಕಾಗಿ ಪಂಚಾಚಾರ್ಯರು ಭೂಮಿಗೆ ಅವತಾರ ಮಾಡಿದರೆಂಬುದನ್ನು ಸ್ವಯಂಭುವಾಗಮದಲ್ಲಿ ಈ ಕೆಳಗಿನಂತೆ ಸ್ಪಷ್ಟಪಡಿಸಲಾಗಿದೆ:—

"ಅವತೀರ್ಯ ಮಹೀಭಾಗೇ ಮದನುಜ್ಞಾನುಸಾರತಃ।
ಪಂಚಾಸ್ಯಪಂಚಪುತ್ರಾಣಾಂ ದೀಕ್ಷಾಂ ಕೃತ್ವಾ ವಿಧಾನತಃ। ।೪೫।
ಉದ್ಧಾರ್ಯ ಭುವಿ ಮದ್ಭಕ್ತಾನ್ ಪಂಚಾರಾಧ್ಯಾ ಇತೀರಿತಾಃ।
ಆರಾಧ್ಯೈಃ ಪಂಚಭಿರೇತೆ ದೀಕ್ಷಿತಾಃ ಖಲು ಪಂಚಮಾಃ। ।೪೬।
ವಂಶಸ್ತು ಪಂಚಮಾನಾಂ ವೈ ಗತೋವೃದ್ಧಿಂ ವರಾನನೇ॥೪೭॥

(ಸ್ವಯಂಭುವಾಗಮ ವೀ। ಸ। ಸಂಗ್ರಹ ಪ್ರಕರಣ ೫)

ಅನಾದಿ ಭಕ್ತರಾದ ಪಂಚಮರ ವಂಶವು ಹೇಗೆ ಪ್ರಾರಂಭವಾಯಿತು? ಹೇಗೆ ಬೆಳೆಯಿತು? ಅವರಿಗೆ ದೀಕ್ಷಾದಿಗಳನ್ನು ಕೊಟ್ಟು ಉದ್ಧರಿಸಿದವರು ಯಾರು? ಎಂಬುದು ಈ ಮೇಲ್ಕಂಡ ಶಿವಾಗಮ ಪ್ರಮಾಣ

ಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿದೆ. ಈ ಭಕ್ತರು ಗುರುವಿಗೆ ತನುವನ್ನೂ ಜಂಗಮಕ್ಕೆ ಧನವನ್ನೂ ಲಿಂಗಕ್ಕೆ ಮನವನ್ನೂ ಅರ್ಪಿಸುತ್ತಿದ್ದರೆಂದು ಶಿವಾಗಮ ಗಳಲ್ಲಿ ಸ್ಪಷ್ಟವಾಗಿ ಉಲ್ಲೇಖಿಸಲ್ಪಟ್ಟಿರುವುದರಿಂದ ಈ ಅನಾದಿ ಭಕ್ತರಿಗೆ ಪೂಜ್ಯ ರಾದ ಗುರು-ಜಂಗಮ ವಂಶೀಯರು ಪ್ರತ್ಯೇಕವಾಗಿ ಇರುವರೆಂದು ಸ್ಪಷ್ಟವಾ ಗುತ್ತದೆ. ಆದುದರಿಂದ ವೀರಶೈವಮತವು ಪ್ರಾರಂಭವಾದಾಗ ಯಾರು ಭಕ್ತರಾಗಿ ಶ್ರೀ ಜಗದ್ಗುರು ಪಂಚಾಚಾರ್ಯರಿಂದ ದೀಕ್ಷಿತರಾಗಿ ಉಪ ದೇಶ ಹೊಂದಿದರೋ ಅವರೇ ಅನಾದಿ ಭಕ್ತರೆನಿಸುವರು. ಅನಂತರ ಅನೇಕ ಮಹನೀಯರು ವೀರಶೈವಮತವನ್ನು ಉದ್ಧಾರಮಾಡುತ್ತ ಬಂದಿ ದ್ದಾರೆ. ಅವರಲ್ಲಿ ಬಸವಣ್ಣನವರು ಅಗ್ರಗಣ್ಯರಾಗಿ ಖ್ಯಾತಿಯನ್ನು ಸಂಪಾದಿಸಿ ದರು. ಭಕ್ತಿಯ ಭರದಲ್ಲಿ ಭಕ್ತನು ತನಗೆ ಬೇಕಾದವರನ್ನು ತನ್ನಭಾವನೆ ಓಡಿ ದಷ್ಟೂ ಸ್ತೋತ್ರಮಾಡುವುದು ಸ್ವಾಭಾವಿಕ. ಶ್ರೀ ಹರಿಹರನವರಾಗಲಿ, ಇತರರಾಗಲಿ ಬಸವಣ್ಣನವರನ್ನು ಸದ್ಗುರು, ಜಗದ್ಗುರು ಮುಂತಾಗಿ ಕರೆದಿ ರುವುದೂ ಅದೇ ಪಂಕ್ತಿಯಲ್ಲಿ ಸೇರುತ್ತದೆ. ಆದರೆ ಅದು ವರ್ಣನೆ ಮಾತ್ರ.

ಹಡೆದ ತಂದೆ ತಾಯಿಗಳು ಬೇರೆ ಇದ್ದರೂ ದೇವರನ್ನು ಭಕ್ತಿಯಿಂದ ಸ್ತೋತ್ರಮಾಡುವಾಗ ನೀನೇ ತಂದೆ, ನೀನೇ ತಾಯಿ, ನೀನೇ ಬಂಧು. ನೀನೇ ಬಳಗ ಎಂದು ಹೊಗಳುವುದು ಸ್ವಾಭಾವಿಕ. ಎಂದಮಾತ್ರಕ್ಕೆ ಹಡೆದ ತಂದೆ ತಾಯಿಗಳೂ, ಬಂಧು ಬಳಗದವರೂ ಇಲ್ಲವೆಂದು ಅರ್ಥವಾಗುವು ದಿಲ್ಲ. ಇದೆಲ್ಲ ಭಕ್ತಿಪರವಶತೆಯ ಮಾರ್ಗ.

ಭೀಮಕವಿಯು ಬಸವಣ್ಣನವರನ್ನು ಸ್ತುತಿಸುವಾಗ ಮಾಡಿರುವ ವರ್ಣ ನೆಯನ್ನು ಇಲ್ಲಿ ಉದಾಹರಿಸಬಹುದಾಗಿದೆ:—

"ದೇವನಪ್ಪನು ನೀನೆ ಸದ್ಗುರು।
ದೇವನಪ್ಪನು ನೀನೆ ಜಂಗಮ।
ದೇವನಪ್ಪನು ನೀನೆ ಸಜ್ಜನ ಭಕ್ತನಪ್ಪವನು॥
ನೀವೆ ಜನನೀಜನಕನಪ್ಪನು।
ನೀವೆ ಬಂಧುವು ಬಳಗವಪ್ಪನು।
ನೀವೆ ಎನಗೆ ಸಮಸ್ತಭಾರಕೆ ಬಸವಸುಕುಮಾರ॥

(ಬಸವ ಪುರಾಣ ಕೋಣಿಕಾಗದ ಪ್ರತಿ ಸಂಧಿ ೬೦ ಪದ್ಯ ೪೭)

ಈ ಪದ್ಯದಲ್ಲಿ ಬಸವಣ್ಣನು ಗುರುವಾಗಿ ಜಂಗಮವಾಗಿ ಮತ್ತೆ ಸಜ್ಜನರಿಗೆ ಭಕ್ತನಾಗಿ ಬಂಧು-ಬಳಗವಾಗಿ ಕೊನೆಗೆ ಕವಿಯ ವಿಶಾಲ ದೃಷ್ಟಿಯಲ್ಲಿ ಸುಕುಮಾರನಾಗಿದ್ದಾನೆ. ಹೀಗೆ ಕವಿಯ ಭಕ್ತಿಯ ಲಹರಿಯಲ್ಲಿ ನಾನಾರೀತಿಯಾಗಿ ಈಸಾಡುವ ಬಸವಣ್ಣನಿಗೆ ಕವಿಯು ಕೊಟ್ಟ ವಿಶೇಷಣಗಳು ಕೇವಲ ಭಕ್ತ್ಯಾವೇಶದ ಪ್ರಶಂಶೆಗಳೆಂದು ಹಸುಮಕ್ಕಳಿಗೂ ಸಹ ತಿಳಿಯುವಂತಿದೆ. ಆದುದರಿಂದ ಶ್ರೀ ಹರಳೆಣ್ಣೆಯವರು ತಾವು ಕೊಟ್ಟ ಆಧಾರಗಳೂ ಕೇವಲ ಪ್ರಶಂಶಾತ್ಮಕವಾದವುಗಳೆಂದು ತಿಳಿದುಕೊಳ್ಳಬೇಕು.

## ಹರಳಯ್ಯ ಮಧುವಯ್ಯಗಳ ವಿಚಾರ

ಶ್ರೀ ಹರಳೆಣ್ಣೆಯವರು ಹರಳಯ್ಯ ಮಧುವಯ್ಯಗಳ ಪುತ್ರ ಪುತ್ರಿಯರ ವಿವಾಹದ ವಿಚಾರವಾಗಿ 'ಲೋಕಾರಾಧ್ಯ ಬಸವಣ್ಣ' ಗ್ರಂಥವು ತಾಳಿರುವ ಸತ್ಯಮಾರ್ಗವನ್ನು ಅಲ್ಲಗಳೆಯಲು ಪ್ರಯತ್ನಿಸಿದ್ದಾರೆ. ಇವರ ದೇಹಸಂಬಂಧ ವಿಚಾರದಲ್ಲಿ ಹಳೆಯ ಯಾವ ಬಸವಪುರಾಣಗಳಲ್ಲಿಯೂ ಆಧಾರಗಳಿಲ್ಲದ್ದರಿಂದ ಆ ವಿಚಾರ ಅಮಾನ್ಯವೆಂಬುದನ್ನು ನಾವು ಈಗಲೂ ದೃಢವಾಗಿ ಸ್ಪಷ್ಟಪಡಿಸುತ್ತಿದ್ದೇವೆ. ಹರಿಹರನ ಬಸವರಾಜರಗಳೆಯಲ್ಲಾಗಲಿ, ಸಿಂಗಿರಾಜನ ಅಮಲ ಬಸವಚಾರಿತ್ರ್ಯ ಕಾವ್ಯದಲ್ಲಾಗಲಿ, ಸೋಮನಾಥನ ತೆಲುಗು ಬಸವಪುರಾಣದಲ್ಲಾಗಲಿ, ಅಥವಾ ಭೀಮಕವಿಯ ಕನ್ನಡ ಬಸವಪುರಾಣದಲ್ಲಾಗಲಿ, ಹರಳಯ್ಯ ಮಧುವಯ್ಯಗಳ ಪುತ್ರ-ಪುತ್ರಿಯರ ಕತೆಯೇ ಇಲ್ಲ. ಅದು ಹಾಗಿರಲಿ, ಮೊಟ್ಟ ಮೊದಲನೆಯದಾದ ತೆಲುಗು ಬಸವಪುರಾಣದಲ್ಲಿ, ಅದರ ಅನುವಾದವಾದ ಭೀಮಕವಿಯ ಕನ್ನಡ ಬಸವಪುರಾಣದ (ಹಸ್ತ ಲಿಖಿತ ಕೃತಿಯ)ಲ್ಲಿ "ಹರಳಯ್ಯ" ಶಬ್ದಕ್ಕೆ ಬದಲು "ಅಲ್ಲಯ್ಯ" ಎಂದು ಉಲ್ಲೇಖಿಸಲ್ಪಟ್ಟಿದೆ. ಆದರೆ ಧಾರವಾಡದ ಲಿಂಗಾಯತ ವಿದ್ಯಾಭಿವೃದ್ಧಿ ಸಂಸ್ಥೆಯವರು ಅಚ್ಚುಹಾಕಿಸಿರುವ ಭೀಮಕವಿಯ ಬಸವಪುರಾಣದಲ್ಲಿ "ಅಲ್ಲಯ್ಯ" ಶಬ್ದಕ್ಕೆ ಬದಲಾಗಿ "ಹರಳಯ್ಯ" ಶಬ್ದವನ್ನು ಸೇರಿಸಿದ್ದಾರೆ.

ಹಸ್ತಲಿಖಿತಪ್ರತಿಯಲ್ಲಿ ಹೀಗಿದೆ :—

"ವತ್ತೆಯುಂ ಕಲ್ಯಾಣಕಟಕದೊ।
ಳುತ್ತಮಾಚಾರ ನಿಯಮ।
ಚಿತ್ತರೆನಲಲ್ಲಯ್ಯ ಮಧುವಯ್ಯಗಳು॥ ॥೧॥

(ಸಂಧಿ ೬೧)

ಧಾರವಾಡದ ಅಚ್ಚಿನಪ್ರತಿಯಲ್ಲಿ ಹೀಗಿದೆ:—

"..... ..... ..... ..... ..... ..... ..... ..... ..... .....
ಚಿತ್ತರರು ಹರಳಯ್ಯ ಮಧುವಯ್ಯಗಳು॥"

ಇದೇ ಸಂಧಿಯ (ಹಸ್ತಲಿಖಿತ ಪ್ರತಿ) ೪ನೇ ಪದ್ಯದಲ್ಲಿ ಹೀಗಿದೆ:—

"ಸೊಗಸದವದಿರ ಮಾತಿಗಲ್ಲ।
ಯ್ಯಗಳ ಮಧುವಯ್ಯಗಳನಾಗಳೆ॥"

ಇದೇ ಪದ್ಯವು ಧಾರವಾಡದ ಅಚ್ಚಿನ ಪ್ರತಿಯಲ್ಲಿ ಹೀಗಿದೆ:—

"ಸೊಗಸದವದಿರಮಾತಿಗ್ಹಳ್ಳ।
ಯ್ಯಗಳ ಮಧುವಯ್ಯಗಳನಾಗಳೆ॥"

ಸೋಮನಾಥನ ತೆಲುಗು ಪ್ರತಿಯಲ್ಲಿಯೂ "ಹರಳಯ್ಯ" ಎಂದು ಬರದೆ "ಅಲ್ಲಯ್ಯ" ಎಂದು ಬಂದಿದೆ. ಇದರಿಂದಾಗಿ ಅಲ್ಲಯ್ಯ ಮಧುವಯ್ಯಗಳು ನಿಜವೋ ಅಥವಾ ಹರಳಯ್ಯ ಮಧುವಯ್ಯಗಳು ನಿಜವೋ ಎಂಬುದನ್ನು ಮೊದಲು ನಿರ್ಣಯಮಾಡಿಕೊಳ್ಳಬೇಕು.

ಒಂದುವೇಳೆ ಹರಳಯ್ಯ ಮಧುವಯ್ಯಗಳೇ ಇರಲಿ, ಬಿಜ್ಜಳನು ಅವರ ಕಣ್ಣುಗಳನ್ನು ಕೀಳಿಸಿದ್ದು ನಿನಾಕಾರಣವೆಂಬುದು ಮಾತ್ರ ಸ್ಪಷ್ಟವಾಗಿದೆ, ಈ ವಿಚಾರವನ್ನು ತಿಳಿಸುವ ಪದ್ಯಭಾಗ ಈ ಕೆಳಗಿನಂತಿದೆ:—

"ಜಗತಿಪಂ ತಪ್ಪೇನುವಿಲ್ಲದೆ ನೀತಿಯಲ್ಲೆಂದು॥
ಬಗೆಯುವವರಂ ಕರೆಸಿ ಕಣ್ಣಂ।
ತೆಗೆಸಿವನು ಮಾಹೇಶ್ವರರ ಮುಖ।
ಮೆಗಳನುದ್ದಂಡತೆಗಳಂ ತಾನರಿಯನೇ ಮುನ್ನ॥ ॥೪॥

ಇದರಿಂದ ಬಿಜ್ಜಳನು ಕಣ್ಣು ಕೀಳಿಸಿದುದಕ್ಕೆ ಕಾರಣ ಮಿಶ್ರ ಬಾಂಧವ್ಯವೇ ಎಂಬುದು ಸ್ಪಷ್ಟವಾಗುವುದಿಲ್ಲ. ಮತ್ತು "ತಪ್ಪೇನುವಿಲ್ಲದೆ" ಕಣ್ಣು ಕೀಳಿಸಿದನೆಂದು ಸ್ಪಷ್ಟವಾಗಿರುವಾಗ ಮಿಶ್ರಬಾಂಧವ್ಯಮಾಡಿದ ಅಪರಾಧಕ್ಕಾಗಿಯೇ ಶಿಕ್ಷೆವಿಧಿಸಿದನೆಂದು ಊಹೆಯನ್ನೂ ಸಹ ಮಾಡಲಿಕ್ಕೆ ಬರುವುದಿಲ್ಲ. ಒಂದು ವೇಳೆ. ಹೇಗೋ ಈ ಮಿಶ್ರ ಬಾಂಧವ್ಯ ನಡೆಯಿತೆಂದು ಊಹಿಸಿದರೂ ಇದಕ್ಕೆ ಬಸವಣ್ಣನವರೇ ಕಾರಣರಾಗಿದ್ದರೆಂದು ಈ ಪುರಾಣಗಳಿಂದ ಸ್ಪಷ್ಟಪಡುವುದಿಲ್ಲ. ಆದುದರಿಂದ ನಾವು ಈ ಮಿಶ್ರ ಸಂಬಂಧಕ್ಕೆ ಹೆಣ್ಣು-ಗಂಡುಗಳ ಕುರುಡುಪ್ರೇಮದ ಕಾಮಾಂಧತೆಯೇ ಕಾರಣವೆಂದು ಈ ಹಿಂದೆಯೇ ಲೋಕಾರಾಧ್ಯ ಬಸವಣ್ಣ ಗ್ರಂಥದಲ್ಲಿ ಸ್ಪಷ್ಟಪಡಿಸಿದ್ದೇವೆ. ಈಗಲೂ ಅದನ್ನೇ ಸ್ಪಷ್ಟಪಡಿಸುತ್ತಿದ್ದೇವೆ.

ಈ ವಿಚಾರದಲ್ಲಿ ನಮ್ಮ ಅಭಿಪ್ರಾಯ ಯಾವಾಗಲೂ ಒಂದೇ ಆಗಿದೆ. ಶ್ರೀ ಹರಳೆಣ್ಣೆಯವರು ಅಭಿಪ್ರಾಯಪಟ್ಟಿರುವಂತೆ "ಬಸವಣ್ಣ ಜಾತಿಸಂಕರ ಮಾಡಿ ವೀರಶೈವಧರ್ಮವನ್ನು ಹಾಳುಮಾಡಿದ ಎಂದು ಒಮ್ಮೆ ಅಪಪ್ರಚಾರ ಮಾಡಿ, ಈಗ ಬಸವಣ್ಣನನ್ನು ಹೊಗಳುವ ನೆಪದಲ್ಲಿ ಅವನು ಜಾತಿ ಸಾಂಕರ್ಯವನ್ನು ಭೋಧಿಸಲಿಲ್ಲ" ಎಂದು ಹೇಳಲು ಹೊರಟಿರುವವರು ನಾವಲ್ಲ. ಬಸವಣ್ಣನವರ ಬಗೆಗೆ ಎಂದಿನಿಂದಲೂ ನಮ್ಮ ಅಭಿಪ್ರಾಯ ಏಕಪ್ರಕಾರವಾಗಿದೆ. ಈ ವಿಷಯ ಪ್ರಪಂಚಕ್ಕೇ ಗೊತ್ತಿದೆ. ಗುರು-ವಿರಕ್ತ ಪಾರ್ಟಿಗಳು ಬಸವಣ್ಣನವರನ್ನು ಬಳಸಿಕೊಂಡು ಪ್ರಬಲವಾಗಿ ಬಡಿದಾಡುತ್ತಿದ್ದಾಗ ನಿಷ್ಠುರವಾಗಿ ದಿಟ್ಟತನದಿಂದ ಉಭಯರಿಗೂ ಬುದ್ಧಿವಾದ ಹೇಳಿ ಮಧ್ಯಮಾರ್ಗವನ್ನು ಸೂಚಿಸಿ ಗುರು-ವಿರಕ್ತರ ಚಳವಳಿಯನ್ನು ಅಡಗಿಸಲು ಪ್ರಯತ್ನ ಪಟ್ಟವರಲ್ಲಿ ನಾವೂ ಒಬ್ಬರೆನ್ನುವುದನ್ನು ಅರಿಯದೆ ಶ್ರೀ ಹರಳೆಣ್ಣೆಯವರು ಸುಮ್ಮನೆ ಏನೇನೊ ಟೀಕಿಸಲು ಹೊರಟಿದ್ದಾರೆ. ನಿನ್ನೆ ಮೊನ್ನೆ ನಡೆದ ಘಟನೆಗಳನ್ನೇ ತಿಳಿದುಕೊಳ್ಳಲು ಅಸಮರ್ಥರಾಗಿರುವ ಶ್ರೀ ಹರಳೆಣ್ಣೆಯವರು ಕ್ಲಿಷ್ಟಕರವಾಗಿರುವ ಬಸವಣ್ಣನವರ ಚರಿತ್ರೆಯ ಬಗ್ಗೆ ವಿಮರ್ಶೆ ಮಾಡಲು ಹೊರಟು ಅಪಹಾಸ್ಯಕ್ಕೆ ಗುರಿಯಾಗಿದ್ದಾರೆ.



# ವಚನಗಳಲ್ಲಿಯೂ ಜ್ಞಾನಕ್ರಿಯಾ ಮಾರ್ಗಗಳಿವೆ



ಶ್ರೀ ಹರಳೆಣ್ಣೆಯವರು ಬಸವಣ್ಣನವರ ವಿಶಾಲದೃಷ್ಟಿಯನ್ನು "ದೇವ ದೇವ ಬಿನ್ನಹವನವಧಾರು" ಎಂಬ ವಚನದಿಂದ ಶಿವಭಕ್ತರಾದವರನ್ನೆಲ್ಲ ಒಂದೇ ಆಗಿ ಕಾಣುತ್ತಿದ್ದನೆಂದು ಮುಂತಾಗಿ ವಿವರಿಸಿದ್ದಾರೆ. ವೀರಶೈವರಲ್ಲಿ ಜ್ಞಾನ ಕ್ರಿಯಾ ಮಾರ್ಗಗಳು ಬೇರೆಬೇರೆಯಾಗಿದ್ದು, ಕ್ರಿಯಾಮಾರ್ಗವು ರಕ್ತಸಂಬಂಧ ಮುಂತಾದ ದೈಹಿಕ ವಿಚಾರದಲ್ಲಿಯೂ, ಜ್ಞಾನಮಾರ್ಗವು ಮುಖ್ಯವಾಗಿ ಜೀವಾತ್ಮ ಪರಮಾತ್ಮರ ಸಾಮರಸ್ಯಕ್ಕಾಗಿಯೂ ಉಪಯೋಗಿಸಲ್ಪಟ್ಟಿವೆ. ವೀರಶೈವರಾದ ಬಸವಣ್ಣನವರು ತಮ್ಮ ಗುರುಗಳಾದ ಜಾತವೇದಿಮುನಿಗಳು ತೋರಿಸಿದ ಈ ಶಿವಾಗಮ ಸಿದ್ಧಾಂತವನ್ನೇ ಜಗತ್ತಿಗೆ ಆಚರಿಸಿ ತೋರಿಸಿದ್ದಾರೆ. "ಧೃತಿಗೆಟ್ಟು ಅನ್ಯರ ಬೇಡದಂತೆ...." ಎಂಬ ಇವರ ವಚನವು ಕ್ರಿಯಾಮಾರ್ಗವಾಗಿ ದೇಹಕ್ಕೂ. "ದೇವ ದೇವ ಬಿನ್ನಪವನವಧಾರು" ಎಂಬೀ ವಚನವು ಕೇವಲ ಜ್ಞಾನಮಾರ್ಗದ ಜೀವ-ಪರಮಾತ್ಮರ ಸಾಮರಸ್ಯದ ತತ್ವಮಾರ್ಗಕ್ಕೂ ಸಂಬಂಧಪಟ್ಟಿವೆ. ಯಾವ ಸನ್ನಿವೇಶದಲ್ಲಿ ಯಾವ ವಚನವನ್ನು ಬಸವಣ್ಣನವರು ಹೇಳಿದ್ದಾರೆ ಎಂಬುದನ್ನು ವೀರಶೈವ ಸಿದ್ಧಾಂತ ಪ್ರಕಾರ ಅರಿತುಕೊಂಡರೆ ತಪ್ಪಿಗೆ ಅವಕಾಶವಾಗುವುದಿಲ್ಲ. ಯಾವ ಸಂದರ್ಭದಲ್ಲೋ ಹೇಳಿದ ವಚನಗಳನ್ನು ಮತ್ತಾವ ಸಂದರ್ಭಕ್ಕೋ ಅಂಟಿಸಿಕೊಂಡು ಅರ್ಥಮಾಡಿದರೆ ಅಪಾರ್ಥವಾಗುವುದಲ್ಲದೆ ಅದರಿಂದ ಅನರ್ಥವೂ ಆಗುತ್ತದೆ.

ಉದಾಹರಣೆಗಾಗಿ ಶಿವನಾಮ ಪ್ರಾಶಸ್ತ್ಯವನ್ನು ಹೇಳುವ ಈ ಕೆಳಗಿನ ಶೃತಿಯಲ್ಲಿ—

"ಅಪಿವಾಯಶ್ಚಾಂಡಾಲಃ ಶಿವೇತಿ ವಚನಂ ವದೇತ್ ।
ತೇನ ಸಹ ಸಂವಿಶೇತ್, ತೇನ ಸಹ ಸಂವಸೇತ್, ತೇನ ಸಹ ಭುಂಜೀತ"

"ಯಾವನೊಬ್ಬ ಚಾಂಡಾಲನಾದರೂ ಆಗಲಿ ಅವನು ಶಿವ ನಾಮವನ್ನು

ಉಚ್ಚರಿಸಿದರೆ ಸಾಕು, ಅವನೊಡನೆ ಕೂಡ್ರಬೇಕು, ಅವನೊಡನೆ ವಾಸ ಮಾಡಬೇಕು, ಅವನೊಡನೆ ಊಟಮಾಡಬೇಕು." ಎಂದು ಈ ಶೃತಿಯ ಅರ್ಥ. ಕೇವಲ ಶಿವನಾಮೋಚ್ಚಾರ ಮಾಡುತ್ತಿರುವ ಚಾಂಡಾಲನೊಡನ ಮೇಲ್ಕಾಣಿಸಿದಂತೆ ಸಹವಾಸ ಸಹಭೋಜನಾದಿಗಳನ್ನು ಮಾಡಿದರೆ. ಶಿವ ದೀಕ್ಷಾ, ಲಿಂಗಧಾರಣ ಮುಂತಾದವುಗಳ ಅವಶ್ಯಕತೆಯಾದರೂ ಏತಕ್ಕೆ ಬೇಕು? ಶಿವದೀಕ್ಷೆಮಾಡುವ ಗುರುಗಳಾದರೂ ಏತಕ್ಕೆಬೇಕು? ಎಂಬ ಪ್ರಶ್ನೆ ಉದ್ಭವಿಸುತ್ತದೆ. ಆದರೆ ಈ ಶೃತಿಯ ಸತ್ಯಾರ್ಥ ಹೀಗಲ್ಲ. ಎಲ್ಲರಿಗೂ ಶಿವನಾಮ ಸ್ಮರಣೆಯು ಶ್ರೇಷ್ಠವಾದುದು. ಶಿವನಾಮ ಸ್ಮರಣೆಯಿಂದ ಜ್ಞಾನ ಪ್ರಾಪ್ತಿಯಾಗುವುದು ಮುಂತಾಗಿ ಶಿವನಾಮಪ್ರಶಂಶೆಗಾಗಿ ಈ ಶೃತಿಯನ್ನು ಹೇಳಲಾಗಿದೆಯೇ ಹೊರತು ಲೌಕಿಕಾಚರಣೆಗೋಸುಗ ಅಲ್ಲವೆಂದು ಸ್ಪಷ್ಟ ವಾಗಿ ತಿಳಿದುಕೊಳ್ಳಬೇಕು.

ಇದರಂತೆ ವೀರಾಗಮವು ಹೇಳುವ

"ಬ್ರಾಹ್ಮಣಾಃ ಕ್ಷತ್ರಿಯಾ ವೈಶ್ಯಾ ಶೂದ್ರಾ ಯೇ ಚಾಂತ್ಯಜಾತಯಃ
ಲಿಂಗಧಾರಣಮಾತ್ರೇಣ ಶಿವಾ ಏವ ನ ಸಂಶಯಃ ॥"

ಎಂಬ ಈ ಶ್ಲೋಕವು ಶಿವಲಿಂಗಧಾರಣದ ಪ್ರಾಶಸ್ತ್ಯವನ್ನು ಹೇಳು ವುದೇವಿನಾ ಮೆಲ್ಕಂಡವರೆಲ್ಲರೂ ಶಿವನೇ ಆಗುತ್ತಾರೆಂದು ನಿರ್ಣಯವಲ್ಲ. ಆದರೆ ಶಿವಲಿಂಗಧಾರಣದಿಂದ ಅವರೆಲ್ಲರ ಜೀವಾತ್ಮ ಪವಿತ್ರವಾಗಿ ಶಿವತ್ವ ವನ್ನು ಹೊಂದುವುದೆಂಬುದನ್ನು ಮಾತ್ರ ಇಲ್ಲಿ ಗ್ರಹಿಸಬೇಕು,

ಇದೇಪ್ರಕಾರ ಶ್ರೀ ಶಂಕರಾಚಾರ್ಯರು

"ಚಾಂಡಾಲೋಸ್ತು ಸ ತು ದ್ವಿಜೋಸ್ತು ।
ಗುರುರಿತ್ಯೇಷಾ ಮನೀಷಾ ಮಮ ॥"

ಎಂದಿದ್ದಾರೆ. ಹೀಗೆಂದ ಮಾತ್ರಕ್ಕೆ ಅವರು ಚಾಂಡಾಲರನ್ನು ತಮ್ಮ ಗುರುಗಳನ್ನಾಗಿ ಎಂದಾದರೂ ಮಾಡಿಕೊಂಡಿದ್ದಾರೆಯೇ? ಇಲ್ಲ. ಆದರೆ ಇಲ್ಲಿ ಇದರ ಅರ್ಥ ಹೀಗಲ್ಲ. ತತ್ವಜ್ಞಾನಿಯಾದವನು ಬ್ರಾಹ್ಮಣನೋ, ಚಾಂಡಾಲನೋ ಯಾರೇ ಇರಲಿ ಅವನನ್ನು ನಾನು ದೊಡ್ಡವನನ್ನಾಗಿ ಭಾವಿ ಸುತ್ತೇನೆ ಎಂಬುದೇ ಇದರ ನಿಜಾರ್ಥ,

ಹೀಗೆಯೇ ಶ್ರೀ ಶಂಕರಾಚಾರ್ಯರು "ನ ಮೇ ಜಾತಿಭೇದಃ" ಎಂತಲೂ. "ನ ಮೇ ದಾನ ಯಜ್ಞಾಃ" ಎಂತಲೂ "ಗುರುರ್ನೈವ ಶಿಷ್ಯಃ" ಎಂತಲೂ ಹಾಡಿಕೊಂಡಿದ್ದಾರೆ. ಹೀಗೆ ಶಂಕರಾಚಾರ್ಯರು "ನನಗೆ ಜಾತಿ ಭೇದವಿಲ್ಲವೆಂದರೂ" ಅವರು ಬ್ರಾಹ್ಮಣರಾಗಿಯೇ ಇದ್ದಾರೆ. "ನನಗೆಯಜ್ಞ ಯಾಗಾದಿಗಳಿಲ್ಲವೆಂದರೂ" ಈಗಲೂ ಯಜ್ಞಯಾಗಾದಿಗಳನ್ನು ಮಾಡುತ್ತಲೆ ಇದ್ದಾರೆ. "ನನಗೆ ಗುರುಗಳಾಗಲಿ ಶಿಷ್ಯರಾಗಲಿ ಇಲ್ಲವೆಂದು" ಹೇಳಿದರೂ ತಮ್ಮ ಗುರುಸ್ತುತಿಯನ್ನು ಮಾಡುತ್ತಲೇ ಇದ್ದಾರೆ, ಮತ್ತು ಶಿಷ್ಯರನ್ನು ಮಾಡಿ ಕೊಳ್ಳುತ್ತಲೇ ಇದ್ದಾರೆ. ಎದಮೇಲೆ ಶಂಕರಾಚಾರ್ಯರ ಮೇಲಿನ ಶ್ಲೋಕದ ನಿಜವಾದ ಅರ್ಥವೇನು? ಶಿವಸ್ವರೂಪಿಯಾದ ಜೀವಾತ್ಮನಿಗೆ ಈ ಮೇಲಿನ ದಾವುದೂ ಸಂಬಂಧಪಡದೇ ಕರ್ಮರಂಗದ ದೇಹಕ್ಕೆ ಮಾತ್ರ ಸಂಬಧಪಡು ವುದೆಂದು ಇದರ ಅರ್ಥ.

ಇದರಂತೆ ಭಗವದ್ಗೀತೆಯಲ್ಲಿ:—

"ವಿದ್ಯಾವಿನಯಸಂಪನ್ನೇ ಬ್ರಾಹ್ಮಣೇ ಗವಿ ಹಸ್ತಿನಿ ।
ಶುನಿಚೈವ ಶ್ವಪಾಕೇಚ ಪಂಡಿತಾಃ ಸಮದರ್ಶಿನಃ॥ ॥೧೮॥
(ಅಧ್ಯಾಯ ೫)

"ಬ್ರಾಹ್ಮಣನಲ್ಲಿಯೂ, ಆಕಳಿನಲ್ಲಿಯೂ, ಆನೆಯಲ್ಲಿಯೂ, ನಾಯಿ ಯಲ್ಲಿಯೂ, ನಾಯಿಯನ್ನು ಬೇಯಿಸಿ ತಿನ್ನುವ ಶ್ವಪಚನಲ್ಲಿಯೂ ಜ್ಞಾನಿ ಗಳಾದ ಪಂಡಿತರು ಸಮಾನ ದೃಷ್ಟಿಯುಳ್ಳವರಾಗಿರುತ್ತಾರೆ.," ಎಂದು ಈ ಶ್ಲೋಕದ ಅರ್ಥ ಮಾಡುವುದಾದರೆ ನಾಯಿಯನ್ನು ಬ್ರಾಹ್ಮಣನಿಗೆ ಸಮಾನ ವಾಗಿ ಒಂದೇ ಗದ್ದುಗೆಯಲ್ಲಿ ಕೂಡ್ರಿಸಿ ಇಲ್ಲಿಯ ವರೆಗೆ ಯಾರೂ ಪೂಜೆ ಮಾಡಿಲ್ಲವಷ್ಟೆ? ಹಾಗೆ ಮಾಡಲು ಬರುವುದೂ ಇಲ್ಲ. ಇಲ್ಲಿ ಕೇವಲ ತಾತ್ವಿಕವಾಗಿ ಈ ಮೇಲ್ಕಂಡ ಸರ್ವರಲ್ಲಿಯೂ ಪರಮಾತ್ಮನ ಅಂಶವಾದ ಜೀವಾತ್ಮವು ಸರ್ವವ್ಯಾಪಕವಾಗಿರುವುದೆಂದು ತಿಳಿಯಬೇಕೆಂಬುದೇ ಇದರ ನಿಜವಾದ ಅರ್ಥ.

ಹೀಗೆ ಬಸವಣ್ಣನವರ ವಚನಗಳೂ ಕೇವಲ ಕ್ರಿಯಾತ್ಮಕಗಳಾಗಿಯೇ ಇಲ್ಲ. ಜ್ಞಾನಾತ್ಮಕವಾಗಿಯೂ ಇವೆಯೆಂಬುದನ್ನು ಅರಿತುಕೊಳ್ಳಬೇಕು. ಅಂದರೆ ಮಾತ್ರ ಸತ್ಯಾರ್ಥವು ಹೊಳೆದೀತು! ಇದಾವ ಸಾಮರ್ಥ್ಯವೂ ಇಲ್ಲದೆ

ಟಾಕಾಪೂರ್ತಿ ರಾಮಾಯಣವನ್ನು ಓದಿದಂತೆ ಶಿವಶರಣರ ವಚನಗಳನ್ನು ಓದಿ ಅಪಾರ್ಥಮಾಡುವುದರಿಂದ ಲಾಭಕ್ಕೆ ಬದಲು ಹಾನಿಯೇ ಹೆಚ್ಚಾಗುತ್ತ ದೆಂಬುದನ್ನು ಇಲ್ಲಿ ಸ್ಪಷ್ಟಪಡಿಸುತ್ತೇವೆ.

# ಚೆನ್ನಬಸವಣ್ಣ ಮತ್ತು ಅಕ್ಕನಾಗಮ್ಮ

ಶ್ರೀ ಹರಳೆಣ್ಣೆಯವರು "ಲೋಕಾರಾಧ್ಯ ಬಸವಣ್ಣ" ಗ್ರಂಥದಲ್ಲಿ ಬಂದಿರುವ "ಬಸವಣ್ಣ ಚೆನ್ನಬಸವಣ್ಣ" ಎಂಬ ಅಧ್ಯಾಯದ ಮೇಲೆ ಆಕ್ಷೇಪ ವೆತ್ತಿ "ತಮಗೆ ಬೇಕಾದ ಪುರಾಣವನ್ನು ಒಪ್ಪುವುದು ಬೇಡವಾದುದನ್ನು ತಿರಸ್ಕರಿಸುವುದು" ಮುಂತಾಗಿ ಟೀಕಿಸಿದ್ದಾರೆ. ಚೆನ್ನಬಸವ ಪುರಾಣಕ್ಕಿಂತಲೂ ಪ್ರಾಚೀನವಾದ ರಾಘವಾಂಕ ಮಹಾಕವಿಯ "ಸಿದ್ಧರಾಮೇಶ್ವರ ಚಾರಿತ್ರ್ಯ" ವೆಂಬ ಸಿದ್ಧರಾಮನ ಜನನಾದಿ ಪೂರ್ಣ ವೃತ್ತಾಂತವನ್ನೇ ನಿರೂಪಿಸಿರುವ ಪ್ರಮಾಣಬದ್ಧವಾದ ಮಹಾಕಾವ್ಯದಲ್ಲಿ ಸಿದ್ಧರಾಮೇಶ್ವರನಿಗೆ ಚೆನ್ನಬಸವೇ ಶ್ವರನು ಶಿವದೀಕ್ಷೆ ಮಾಡಿದನೆಂದು ಎಲ್ಲಿಯೂ ಹೇಳಿಲ್ಲವೆಂಬುದನ್ನು ಆ ಮಹಾಕಾವ್ಯದ ಆಧಾರದಿಂದ ಬರೆದರೆ ಶ್ರೀ ಹರಳೆಣ್ಣೆಯವರಿಗೆ ಆ ಮಹಾ ಕಾವ್ಯವು ಮಾನ್ಯವಾಗಿಲ್ಲ. ಅವರು ಇನ್ನೊಮ್ಮೆ ಈ ಮಹಾಕಾವ್ಯವನ್ನು ಚೆನ್ನಾಗಿ ಓದಿ ನಿಜಾಂಶವನ್ನು ತಿಳಿದುಕೊಳ್ಳಲಿ.

ಪ್ರಾಚೀನ ಗ್ರಂಥಗಳನ್ನು ಶೋಧಿಸಿದ ಹಾಗೆಲ್ಲ ಹೊಸ ಹೊಸ ಚರಿ ತ್ರಾಂಶಗಳು ಸಿಗುತ್ತವೆ. ಅವುಗಳನ್ನು ಪ್ರಮಾಣವಾಗಿ ಗ್ರಹಿಸಲೇಬೇಕಾಗು ತ್ತದೆ. ಇತ್ತಲಾಗಿ ಬಹುದಿವಸಗಳಿಂದ ಅನೇಕರು ಅಕ್ಕನಾಗಮ್ಮ ಬಸವಣ್ಣ ನವರ (ಒಂದೇ ಉದರದಿಂದ ಬಂದ) ಅಕ್ಕನೆಂದು ಭಾವಿಸಿದ್ದರು. ಆದರೆ ಕೈ॥ ಶ್ರೀ ಹರ್ಡೇಕರ್ ಮಂಜಪ್ಪನವರು ಸಿಂಗಿರಾಜಪುರಾಣವನ್ನು ಶೋಧಿಸಿ ತಮ್ಮ "ಬಸವ ಚರಿತ್ರೆ"ಯಲ್ಲಿ ಈ ಕೆಳಗಿನಂತೆ ಬರೆದು ಆ ಭಾವನೆಯನ್ನು ಬಯಲು ಮಾಡಿದ್ದಾರೆ:—

"ವೈರಾಗ್ಯವೀರನಾದ ಶಿವದೇವನ ಮಗಳಾದ ಅಕ್ಕನಾಗಮ್ಮನನ್ನು ಬಸವನ ಉಪಚಾರಕ್ಕೋಸ್ಕರ ಅಲ್ಲಿಟ್ಟು ತನ್ನಮನೆಗೆ ಬಂದರೆಂದು ಸಿಂಗಿರಾಜ

ಪುರಾಣದ ಐದನೆಯ ಸಂಧಿಯಿಂದ ಗೊತ್ತಾಗುತ್ತದೆ. ಈ ಅಕ್ಕನಾಗಮ್ಮನು ಬಸವಣ್ಣನವರ ಅಕ್ಕನೆಂದು ಬಿಜ್ಜಳರಾಯನು ಹೇಳಿದ ವಿಷಯವು ಇದೇ ಪುರಾಣದ ೩೪ನೇ ಸಂಧಿಯಲ್ಲಿ ಉಕ್ತವಾಗಿದೆ. ಇದರಮೇಲಿಂದ ಬಸವಣ್ಣನು ಅಕ್ಕನಾಗಮ್ಮನು ತನ್ನ ಸಂಗಡ ಮೊದಲೇ ಕಪ್ಪಡಿಗೆ ಬಂದು ತನ್ನನ್ನು ಸಂರಕ್ಷಿಸುತ್ತ ಬಂದುದರಿಂದ ಅಕ್ಕನೆಂದೇ ಭಾವಿಸಿ ಆ ಪ್ರಕಾರ ಹೇಳುತ್ತಿದ್ದನೆಂದು ತೋರುತ್ತದೆ. ಆದುದರಿಂದ ಬಸವಪುರಾಣಾದಿ ಅನೇಕ ಗ್ರಂಥಗಳಲ್ಲಿ ಅಕ್ಕನಾಗಮ್ಮನು ಬಸವಣ್ಣನ ಸಹೋದರಿಯೆಂದು ಹೇಳಿದ್ದಾರೆ.''

ಈ ಅಭಿಪ್ರಾಯದ ಮೇಲಿಂದ ಅಕ್ಕನಾಗಮ್ಮನು ಮಾದರಸನ ಮಗಳಲ್ಲವೆಂದು ಸ್ಪಷ್ಟವಾಯಿತು. ಇಂತಹ ಎಲ್ಲ ಚರಿತ್ರಭಾಗಗಳು ಪುರಾತನವಾದ ಪುರಾಣಗಳಲ್ಲಿ ದೊರಕುವವೆಂಬುದನ್ನು ಅರಿತುಕೊಳ್ಳಬೇಕು.

ಚೆನ್ನಬಸವಪುರಾಣದಲ್ಲಿ ಚೆನ್ನಬಸವೇಶ್ವರನ ಜನನದ ಬಗ್ಗೆ ವಿರೂಪಾಕ್ಷಪಂಡಿತನು ಮಾಡಿರುವ ಅಪಸವ್ಯವನ್ನು ಹಳೇ ಪುರಾಣಗಳ ಆಧಾರಗಳಿಂದ ಹೊಡೆದುಹಾಕಿ ಚೆನ್ನಬಸವೇಶ್ವರನಿಗೆ ಶಿವಸ್ವಾಮಿಯೆಂಬ ತಂದೆಯಿದ್ದನೆಂದು 'ಲೋಕಾರಾಧ್ಯ ಬಸವಣ್ಣ' ಗ್ರಂಥದಲ್ಲಿ ಸ್ಪಷ್ಟಪಡಿಸಲಾಗಿದೆ,

## ಶೂನ್ಯ ಸಿಂಹಾಸನ

ಇನ್ನು ಶ್ರೀ ಹರಳಿಣ್ಣೆಯವರು ಶೂನ್ಯ ಸಿಂಹಾಸನದ ಬಗ್ಗೆ ಪ್ರಸ್ತಾಪಿಸಿ "ಅಲ್ಲಮಪ್ರಭು ಮತ್ತು ಶೂನ್ಯಸಿಂಹಾಸನದ ಬಗ್ಗೆ ಇವರಿಗಿರುವ ಅಜ್ಞಾನವು ಎದ್ದುಕಾಣುತ್ತದೆ" ಎಂದು ನಮ್ಮನ್ನು ಟೀಕಿಸಿದ್ದಾರೆ. ಈ ಬಗ್ಗೆ ಇವರಿಗೆ ಸಂಪೂರ್ಣ ಅಜ್ಞಾನವಿರುವುದರಿಂದಲೇ ಹೀಗೆ ಟೀಕಿಸಿದ್ದಾರೆಂದು ತಿಳಿಯುತ್ತದೆ. ಬಸವಣ್ಣನವರ ಜನನ ಮೊದಲು ಶಿವೈಕ್ಯದ ಕೊನೆಯ ವರೆಗೆ ವಿಷಯ ಪ್ರತಿಪಾದನೆಯುಳ್ಳ ಯಾವ ಬಸವಪುರಾಣಗಳಲ್ಲಿಯೂ ಶೂನ್ಯಸಿಂಹಾಸನದ ವಿಚಾರ ಬಾರದೇ ಇರುವುದನ್ನೂ, ಸಿಂಗಿರಾಜ ಪುರಾಣದಲ್ಲಿ ಆ ಶೂನ್ಯಸಿಂಹಾಸನವು ರಚಿಸಲ್ಪಟ್ಟ ವಿಚಾರವು ಬಂದಿದ್ದರೂ, ಅದರ ಮೇಲೆ ಅಲ್ಲಮಪ್ರಭುವು ಕಂಗೊಳಿಸದಿರುವುದನ್ನೂ ನಾವು ಆಶ್ಚರ್ಯದಿಂದ ಪ್ರಕ

ಟಿಸಿದ್ದೇವೆ. ಇದರಮೇಲಿಂದ ಶೂನ್ಯಸಿಂಹಾಸನವೇ ಇಲ್ಲವೆಂದು ನಾವು ಹೇಳಿದಂತಾಗುವುದಿಲ್ಲ. ಅದರ ಬಗ್ಗೆ ಪ್ರತ್ಯೇಕವಾಗಿ ಒಂದು ಗ್ರಂಥವನ್ನು ಬರೆಯಬೇಕಾಗಿದೆ.

ಅನೇಕ ಸಾತ್ಯಾಂಶಗಳನ್ನು ಹೊರಗೆಡಹಿದ್ದಕ್ಕೆ 'ಲೋಕಾರಾಧ್ಯ ಬಸವಣ್ಣ' ಗ್ರಂಥವನ್ನು ಅನೇಕರು ಪ್ರಶಂಸಿಸಿರುತ್ತಾರೆ. ಆದರೆ ತದ್ವಿರುದ್ಧವಾಗಿ ಶ್ರೀ ಹರಳಿಣ್ಣೆಯವರು "ಲೋಕಾರಾಧ್ಯ ಬಸವಣ್ಣ ಗ್ರಂಥದ" ಮೇಲೆ ಮತ್ತು ಗ್ರಂಥಕರ್ತರ ಮೇಲೆ ಹೀನಾಯವಾದ ಶಬ್ದಗಳನ್ನು ಉಪಯೋಗಿಸಿ ವೃಥಾ ಆಕ್ರೋಶಪಟ್ಟುಕೊಂಡಿದ್ದಾರೆ. ಬಸವಾದಿ ಶಿವಶರಣರ ಸಾಹಿತ್ಯವನ್ನು ಇವರೂ, ಇವರ ಸಂಗಿಗಳೂ ಗುತ್ತಿಗೆ ತೆಗೆದುಕೊಂಡಿಲ್ಲವಷ್ಟೇ? ಶ್ರೀ ಜಗದ್ಗುರು ಪಂಚಾಚಾರ್ಯರ ಸಾಹಿತ್ಯವೇ ಆಗಲಿ, ಬಸವಾದಿ ಶಿವಶರಣರ ಸಾಹಿತ್ಯವೇ ಆಗಲಿ ಎಲ್ಲರ ಸೊತ್ತಾಗಿದೆಯೆಂಬುದನ್ನು ಇವರು ಇನ್ನಾದರೂ ಅರಿತುಕೊಳ್ಳುವುದು ಒಳ್ಳೆಯದೆಂದು ನಾವು ಸೂಚಿಸುತ್ತೇವೆ. ಅಲಮತಿ ವಿಸ್ತರೇಣ.

ಬೆಳಗು ! ಪಂಚಾಚಾರ್ಯ ತತ್ತ್ವವೆ !!
ಬೆಳಗು ! ವಿರತರಶೂನ್ಯ ತತ್ತ್ವವೆ !!
ಬೆಳಗು ! ಬಸವನ ಭಕ್ತಿ ತತ್ತ್ವವೆ ! ಸರ್ವಸಮತೆಯೊಳು !!
ಬೆಳಗು ! ಜಂಗಮವಂಶ ದೀಪವೆ !!
ಬೆಳಗು ! ಭಕ್ತರವಂಶ ದೀಪವೆ !!
ಬೆಳಗು ! ದ್ವೇಷಾಸೂಯೆಗಳ ಕಾರ್ಗತ್ತಲೆಯ ಕಳೆದು !!

**ಶಿವಂ ಭೂಯಾತ್**



# ಲೋಕಾರಾಧ್ಯಬಸವಣ್ಣ ಗ್ರಂಥ (೧ ನೆಯಭಾಗ) ದ ಬಗೆಗೆ ಪಂಡಿತೋತ್ತಮರ ಹಾಗೂ ಸಮಾಜದ ಗಣ್ಯ ವ್ಯಕ್ತಿಗಳ ಸದಭಿಪ್ರಾಯಗಳು.

## ಶರಣ ಸಾಹಿತ್ಯ ಪತ್ರಿಕೆ ಬೆಂಗಳೂರು ೬೮ ಮಾರ್ಚ

ಸಂಪಾದಕರು:- ಪಂಡಿತರತ್ನಂ ಪದ್ಮಶ್ರೀ ವೇ|| ಬಿ. ಶಿವಮೂರ್ತಿ ಶಾಸ್ತ್ರಿಗಳವರು ಅವರ ಅಭಿಪ್ರಾಯ

ಲೋಕಾರಾಧ್ಯಬಸವಣ್ಣನವರು ಕ್ರೌನ್ ೧/೮ ಪುಟ ೫೨ ಬೆಲೆ ೧-೦೦.

ಗ್ರಂಥಕರ್ತರು: ಶ್ರೀಶೈಲಜಗದ್ಗುರು ವಾಗೀಶಪಂಡಿತಾರಾಧ್ಯರು

ಪ್ರಕಾಶಕರು: ಡಾ|| ಎಮ್. ಸಿ. ನಂಜಪ್ಪನವರು, ದಾವಣಗೇರಿ

ವೀರಶೈವ ಪಂಚಪೀಠಾಧಿಪತಿಗಳಲ್ಲಿ ಒಬ್ಬರಾದ ಶ್ರೀಶೈಲ ಜಗದ್ಗುರುಗಳು ಈ ಗ್ರಂಥವನ್ನು ರಚಿಸಿ ಬಸವಣ್ಣನವರ ೮ ನೇ ಶತಮಾನೋತ್ಸವಗಳಲ್ಲಿ ಪ್ರಕಟಿಸಿದ್ದಾರೆ. ಇತ್ತೀಚೆಗೆ ಪಂಚಪೀಠದವರೂ, ವಿರಕ್ತಪೀಠದವರೂ ಒಟ್ಟುಗೂಡುವ ನಿದರ್ಶನಗಳು ಕಂಡು ಬರುತ್ತಿವೆ. ಈ ಮಧುರ ವಾತಾವರಣಕ್ಕೆ ಇದು ಒಂದು ಸಾಕ್ಷಿಯಾಗಿದೆ.



## ಮಹಾಜನ ಪತ್ರಿಕೆ ಹುಬ್ಬಳ್ಳಿ ೨—೪—೧೯೬೮

ಸಂಪಾದಕರು:— ಎಮ್. ಬಿ. ಬೂದಿಹಾಳಮಠ ಅವರ ಅಭಿಪ್ರಾಯ

ಆಚಾರ್ಯರ ದೃಷ್ಟಿಯಲ್ಲಿ ಬಸವಣ್ಣನವರ ಚರಿತ್ರೆ.

ಶ್ರೀಶೈಲಜಗದ್ಗುರುಗಳು ಬಸವಣ್ಣನವರ ಲೋಕಾರಾಧ್ಯತೆಯನ್ನು ಎತ್ತಿ ಹೇಳಿದ್ದಾರೆ.

ಶ್ರೀಗಿರಿರಾಜ ಸೂರ್ಯಸಿಂಹಾಸನಾಧೀಶ್ವರ ಶ್ರೀ ೧೦೦೮ ಶ್ರೀಶೈಲ ಜಗದ್ಗುರು ವಾಗೀಶಪಂಡಿತಾರಾಧ್ಯಶಿವಾಚಾರ್ಯ ಮಹಾಸ್ವಾಮಿಗಳಿಂದ ರಚಿತವಾಗಿರುವ ಗ್ರಂಥವು "ಲೋಕಾರಾಧ್ಯ ಬಸವಣ್ಣ" ಎಂಬ ನೂತನನಾಮಕರಣದಿಂದ ಚಿಕಿತ್ಸಕ ಅಭ್ಯಾಸಿಗಳನ್ನು ಆಕರ್ಷಿಸಿದೆ.

ಬಸವಣ್ಣನವರ ಜೀವನಚರಿತ್ರೆ ಅನೇಕ ಬಗೆಯ ಅಭಿಪ್ರಾಯಗಳಿಂದ ಇಷ್ಟುಕಾಲವಾದರೂ ನಿರ್ಣಾಯಕ ಘಟ್ಟವನ್ನು ಮುಟ್ಟಿಲ್ಲ. ಲೋಕಾರಾಧ್ಯ ಬಸವಣ್ಣ ಎಂಬ ಗ್ರಂಥದಲ್ಲಿ ಮಹಾಸ್ವಾಮಿಗಳವರು ವೀರಶೈವ ಕುಲ ಗೋತ್ರ ಶಾಖಾಸೂತ್ರ ಸಮ್ಮಂಧದ ಸುಸೂತ್ರವಾದ ಹಾದಿಯಿಂದ ಬಸವಣ್ಣನವರ ಚರಿತ್ರೆಯನ್ನು ಬೆಳಕಿಗೆ ತಂದಿರವುದು ಧೈರ್ಯ, ಸಾಹಸ, ಮತ್ತು ಪಾಂಡಿತ್ಯಗಳ ದ್ಯೋತಕವಾಗಿದೆ.

---

WARAD ESTATE
SHOLAPUR 2
Maharashtra – India
18 th April 1968

To

His Holiness Sri Jagadguru Maha Swamyiji
Srisailam.

May it Please your Holiness,

I have received with greatest Pleasure the copy of the Viz, " Lokaradhya Basavanna " sent by your Holiness, which is published by your Holiness in commomoration of The 8th centenary celebrations of Mahatma Shri Basaveswara.

The Book is worth Reaiding and preserving as it is full of various important references about

the Principles Preached by Mahatma Shri Basaveswara.

Your Holiness's Humble Disciple
(BabaSaheb Warad)



## ಶ್ರೀಮಾನ್, ಸೊಪ್ಪಿನ ಗುರುಲಿಂಗಪ್ಪನವರು
### (ಗುರು ಸೇವಾಕಿಂಕರ) ಅವರ ಅಭಿಪ್ರಾಯ

ಹುವಿನಹಡಗಲಿ ೨೫–೪–೧೯೬೮

ಶ್ರೀಶೈಲಜಗದ್ಗುರುಗಳವರ ಶ್ರೀ ಲೋಕಾರಾಧ್ಯ ಬಸವಣ್ಣ ವ್ಯಾಸ ಸೂತ್ರದಂತೊಪ್ಪಿದೆ.

ಶ್ರೀಶೈಲಜಗದ್ಗುರು ವಾಗೀಶಪಂಡಿತಾರಾಧ್ಯ ಶಿವಾಚಾರ್ಯ ಮಹಾ ಸ್ವಾಮಿಗಳವರು ಸಂಪಾದಿಸಿದ ಶ್ರೀ ಲೋಕಾರಾಧ್ಯ ಬಸವಣ್ಣ ಗ್ರಂಥವು ಸರಳವೂ, ಆಧಾರಯುಕ್ತವೂ, ಸಂಶೋಧನಾತ್ಮಕವೂ ಆಗಿದೆ. ಶ್ರೀ ಬಸವಣ್ಣನವರು ಸಾಮಾಜಿಕ, ರಾಜಕೀಯ, ಧಾರ್ಮಿಕ ಮತ್ತು ಸಮತಾವಾದದ ಮಹಾಪುರುಷರಿದ್ದಂತೆ ಗುರ್ವನುಗ್ರಹ ಹೊಂದಿ ಮಹಾ ಗುರುಭಕ್ತರೂ ಆಗಿದ್ದರೆಂದು ಸುಸ್ಪಷ್ಟಗೊಳಿಸಿದೆ.

೮೦೦ ವರ್ಷಗಳ ನಂತರ ಸಮಾಜದ ಮೇಲೆ ಹೊಸ ಬೆಳಕನ್ನು ಚೆಲ್ಲಿದ ಮೊದಲಿನ ಅಪೂರ್ವಗ್ರಂಥವಿದಾಗಿದೆ.

ಇದೊಂದು ಚಿಕ್ಕ ಶುದ್ಧ ಮಹರ್ಷಿ ವ್ಯಾಸರ ಸೂತ್ರಗಳಂತೊಪ್ಪುತ್ತಿರುವುದು.

ಈ ಸತ್ಯಸಿದ್ಧಾಂತವನ್ನಿಲ್ಲಿ ಲೋಕವೇ ಅರಿತುಕೊಳ್ಳಲೆಂದೂ ಇಂತಹ ಇನ್ನೂ ಅನೇಕ ಸಂಶೋಧನಾತ್ಮಕ ಗ್ರಂಥಗಳು ಜಗದ್ಗುರು ಮಹಾಸನ್ನಿಧಿಯವರಿಂದ ಹೊರಬೀಳಲೆಂದೂ ಹಾರೈಸುತ್ತೇನೆ.



# ಸದ್ಧರ್ಮ ಪ್ರಭಾ ಪತ್ರಿಕೆ, ಉಜ್ಜಯಿನಿ.

ಸಂಪಾದಕರು: ಶ್ರೀ. ಷ. ಬ್ರ. ಶಿವಪ್ರಕಾಶ ಶಿವಾಚಾರ್ಯರು.
೧ ನೇ ಸಂಚಿಕೆ ಸಂಪುಟ ೫ ಇಸ್ವಿ ೧೯೭೮

## ಗ್ರಂಥ ವಿಮರ್ಶೆ.

ಡಾ|| ಟಿ. ಜಿ. ಶಿದ್ದಪ್ಪಾರಾಧ್ಯರು, ಎಮ್. ಎ. ಪಿ. ಎಚ್. ಡಿ.
ಮಾನಸ ಗಂಗೋತ್ರಿ. ಮೈಸೂರು. ಇವರ ಅಭಿಪ್ರಾಯ.

ಶ್ರೀಶೈಲ ಸೂರ್ಯಸಿಂಹಾಸನಾಧೀಶ್ವರ ಜಗದ್ಗುರು ವಾಗೀಶಪಂಡಿತಾರಾಧ್ಯ ಶಿವಾಚಾರ್ಯಮಹಾಸ್ವಾಮಿಗಳವರು ರಚಿಸಿರುವ ಲೋಕಾರಾಧ್ಯ ಬಸವಣ್ಣ ಎಂಬ ಪುಸ್ತಕವನ್ನು ಓದಿ ಸಂತೋಷವಾಯಿತು, ಮಹಾಸ್ವಾಮಿಗಳು ಕೇವಲ ಸ್ವಾಮಿಗಳೆನಿಸಿ ಭಕ್ತರ ಮನೆಗೆ ಹೋಗಿ ಅವರಿಗೆ ಯತೋಚಿತವಾಗಿ ಉಪದೇಶಮಾಡಿ ಅವರಿಂದ ಸಾಕಷ್ಟು ದಕ್ಷಿಣೆ ಸಂಭಾವನೆಗಳನ್ನೂ ಪಡೆದು ಆರಾಮವಾಗಿ ಕಾಲವನ್ನು ಕಳೆಯುವವರಲ್ಲವೆಂಬುದು ಈ ಗ್ರಂಥದ ಅವಲೋಕನ ಮಾಡಿದ ಎಲ್ಲರಿಗೂ ಮನವರಿಕೆಯಾಗಲಿದೆ. ಶ್ರೀಶೈಲ ಪೀಠದ ಜೀರ್ಣೋದ್ಧಾರ ಮತ್ತು ಧಾರ್ಮಿಕ ಹಕ್ಕು ಬಾಧ್ಯತೆ ವಿಚಾರವಾಗಿ ಮಾಡಿರುವ ಕಾರ್ಯ ಸ್ತುತ್ಯವಾಗಿದೆ. ಅಂತೆಯೇ ಧಾರ್ಮಿಕ, ಸಾಮಾಜಿಕ ಸುಧಾರಣೆ ಕಾರ್ಯ ಪ್ರತ್ಯಕ್ಷವಾಗಿ ಕಾಣಬಹುವಾಗಿದೆ. ಈ ಪುಸ್ತಕವನ್ನು ಸೂಕ್ತವಾದ ವಿಮರ್ಶಕ ದೃಷ್ಟಿಯಿಂದ ರಚಿಸಿ ಬಹಳಕಾಲದಿಂದಲೂ ಸಂದೇಹಕ್ಕೆಡೆಗೊಂಡಿದ್ದ ಅಂಶವನ್ನು ಲಲಿತವಾಗಿಯೂ, ಸಪ್ರಮಾಣವಾಗಿಯೂ ಬಗೆಹರಿಸಿದ್ದಾರೆ, ಬಸವಣ್ಣನಿಗೆ ಕೂಡಲಸಂಗಮದೇವನಿಂದ ಲಿಂಗಧಾರಣವೂ, ಉಪದೇಶವೂ, ಆಯಿತೆಂಬ ವಾರ್ತೆ ಎಲ್ಲೆಡೆಯಲ್ಲೂ ಹಬ್ಬಿದೆ. ಕೂಡಲ ಸಂಗಮನೆಂಬುದು ಪ್ರತಿಷ್ಠಿತವಾದ ಲಿಂಗದ ಹೆಸರು. ವೀರಶೈವ ಧರ್ಮದಲ್ಲಿ ಪ್ರತಿಷ್ಠಿತಲಿಂಗವನ್ನು ಅಲ್ಲಗಳೆಯದೆ ಇದ್ದರೂ ಅದರ ಉಪಾಸನೆಗೆ ಪ್ರಾಧಾನ್ಯವಿಲ್ಲ. ಅಂತಹ ಲಿಂಗವು ಬಸವಣ್ಣನ ಭಕ್ತಿಗೆ ಮೆಚ್ಚುವುದು ನಿಜವಾದರೂ, ಅದು ಜಂಗಮರೂಪದಲ್ಲಿ ಬಂದು ಬಸವಣ್ಣನಿಗೆ ಸ್ವಪ್ನದಲ್ಲಿ ದರ್ಶನವನ್ನು ಕೊಟ್ಟು ಲಿಂಗಧಾರಣ ಮಾಡಿತ್ತೆಂಬುದನ್ನು ಬಹಳ ಕ್ಲೇಶದಿಂದ ಒಪ್ಪಿಕೊಳ್ಳ

ಬೇಕಾಗಿತ್ತು. ಅದರ ಸಮಶ್ಯೆಯನ್ನು ಶಿಂಗಿರಾಜ ಪುರಾಣದ ಆಧಾರದ ಮೇಲೆ ಬಿಡಿಸಿಕೊಟ್ಟು ಕತ್ತಲೆಯಲ್ಲಿ ಪಡದಾಡುತ್ತಿರುವ ಸಾಧಕರಿಗೆ ಕೈ ದೀವಿಗೆಯನ್ನು ನೀಡಿದ್ದಾರೆ. ಕೂಡಲ ಕ್ಷೇತ್ರದ ಬೃಹನ್ಮಠದ ಶ್ರೀ ಜಾತವೇದ ಶಿವಾಚಾರ್ಯರು ಬಸವಣ್ಣನಿಗೆ ಲಿಂಗಧಾರಣೆಮಾಡಿದ್ದಲ್ಲದೆ ಸೂಕ್ತವಾದ ಉಪದೇಶಾಮೃತದಿಂದ ಅವನನ್ನು ಅನೇಕ ವೇಳೆ ಸಂತೈಸಿದ ಅಂಶವನ್ನು ಶ್ರೀಗಳು ಆಧಾರ ಸಹಿತವಾಗಿ ಹೊರಗೆಡಹಿದ್ದಾರೆ.



## ಅಮರವಾಣಿ, ರಾಯಚೂರು.

ಮಾರ್ಚ, ಎಪ್ರಿಲ್, ೧೯೬೧

ಸಂಪಾದಕರು: ವಿದ್ವಾನ್ ಬಿ. ಎಮ್. ವೀರೇಶ್ವರ ಶಾಸ್ತ್ರಿ

ಉಪ ಸಂಪಾದಕರು: ಡಾ|| ಎಸ್. ಎಮ್. ಹುಣಶ್ಯಾಳ, M.A ,P.H.D.

ಸಹ ಸಂಪಾದಕರು: ಪ್ರೊ|| ವಿ. ಶಿವಾನಂದ, ಎಮ್. ಎ.

ಶ್ರೀಶೈಲ ಜಗದ್ಗುರುಗಳು ಬರೆದ ಲೋಕಾರಾಧ್ಯಬಸವಣ್ಣ ಎಂಬ ಗ್ರಂಥದ ವಿಷಯುವಾಗಿ ದಾವಣಗೇರಿ ಹರಳೆಣ್ಣೆ ಕೊಟ್ರಬಸಪ್ಪನವರು ಬಿ. ಎ. ಎಲ್. ಎಲ್. ಬಿ. ಇವರು ಧಾರವಾಡದ ಸಾವಧಾನ ಪತ್ರಿಕೆಯ ಸಂಪುಟ ೨೨ ಸಂಚಿಕೆ ೧-೨ ರಲ್ಲಿ ಬರೆದ ಲೇಖನದ ಖಂಡನೆ. ಲೇಖಾಂಕ ೩

### ಶ್ರೀಮಾನ್ ಲಿಂಗಣ್ಣ ಕುಷ್ಟಗಿ ಇವರ ಅಭಿಪ್ರಾಯ



ಶ್ರೀಶೈಲಜಗದ್ಗುರುಗಳು ಶಾಸ್ತ್ರಬದ್ಧವಾಗಿ ಪ್ರತಿಪಾದಿಸಿರುವ ವಿಷಯಗಳೆಲ್ಲ ನೂರಕ್ಕೆ ನೂರು ಸತ್ಯವಾಗಿರುತ್ತವೆ. ಕೊಟ್ರಬಸಪ್ಪನವರು ಪ್ರತಿಪಾದಿಸಿರುವ ವಿಷಯುಗಳು ನೂರಕ್ಕೆ ನೂರು ಸುಳ್ಳಿರುತ್ತವೆ. ೧ ನಯಾಪೈಸದಷ್ಟಾದರೂ ನಿಜವಿರುವದಿಲ್ಲ. ಶಾಸ್ತ್ರ ಬದ್ಧವಾದ ಸಿದ್ಧಾಂತಕ್ಕೆ ಗಮನವನ್ನು ಕೊಡದೆ ಬರೆ ಬಾಯಿಬುರುಡೆಯ ಮಾತುಗಳಿಂದಲೇ ತಮ್ಮ ಜೋಳಿಗೆ ಬೇಯಿಸಿ ಕೊಂಡಿದ್ದಾರೆ. ಇಂಥ ವಿಷಯುಗಳಿಗೆ ಯಾರೂ ಬೆಲೆಯನ್ನು ಕೊಡ

ಕೂಡದು. ಕೊಟ್ರಬಸಪ್ಪನವರ ಇಷ್ಟೆಲ್ಲ ಹೋರಾಟವು ಭಕ್ತನು ಮಹೇಶ್ವರ ನಾಗಲಿಕ್ಕೆ ಬರುತ್ತದೆ ಎಂಬುದನ್ನು ಸಿದ್ಧಾಂತ ಮಾಡುವ ಪ್ರಯತ್ನವೇ ಪ್ರಯತ್ನ.



## ಕುಂದಗೋಳದ ಪಂಚಗ್ರಹ ಹಿರೇಮಠದ ಸ್ಥಿರಪಟ್ಟಾಧ್ಯಕ್ಷ ಪ್ರವಚನಾಚಾರ್ಯ ಶ್ರೀ ಷ|| ಬ್ರ||

## ಸಿದ್ಧಲಿಂಗಶಿವಾಚಾರ್ಯಸ್ವಾಮಿಗಳವರ ಅಭಿಪ್ರಾಯ.

ಶ್ರೀ ೧೦೦೮ ಜಗದ್ಗುರು ವಾಗೀಶಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳವರ ದಿವ್ಯಸನ್ನಿಧಿಯಲ್ಲಿ ಮಾಡುವ ದೀರ್ಘದಂಡನಮಸ್ಕಾರ ಗಳು. ಸನ್ನಿಧಿಯಲ್ಲಿ ಅರಿಕೆಮಾಡಿಕೊಳ್ಳುವ ವಿಷಯ ಶ್ರೀ ಸನ್ನಿಧಿಯವರ ಕೃಪಾಶೀರ್ವಾದಪತ್ರ ತಲುಪಿ ವಿಷಯ ತಿಳಿದು ನಮ್ಮ ಮನಸ್ಸಿಗೆ ಬಹಳ ಸಂತೋಷವೆನಿಸಿತು. ಲೋಕಾರಾಧ್ಯಬಸವಣ್ಣ ಎಂಬ ಗ್ರಂಥವನ್ನು ಪೂರ್ಣ ಓದಿನೋಡಿದೆವು. ಗ್ರಂಥಸ್ಥವಿಷಯವು ಪಂಡಿತ ಪಾಮರರಿಗೂ ಮಾನ್ಯವೆನಿ ಸುವಂತಾಗಿದೆ. ಶ್ರೀ ಬಸವಣ್ಣನವರ ವಿಷಯದಲ್ಲಿ ಶ್ರೀಸನ್ನಿಧಿಯವರು ಹರಿಹರ, ರಾಘವಾಂಕ, ಭೀಮಕವಿ, ಮೊದಲಾದ ಪಂಡಿತರು ಬರೆದ ಗ್ರಂಥ ಗಳನ್ನು ಮತ್ತು ವಚನಗಳನ್ನು ಸಂಶೋಧಿಸಿ ಸತ್ಯಾಂಶವನ್ನೇ ಬರೆದು ಚಿಕ್ಕ ದಾದ ಗ್ರಂಥರೂಪದಿಂದ ಪ್ರಕಟನೆಮಾಡಿದ್ದು ಬಹಳೇ ಸ್ತುತ್ಯ. ಸದ್ಯದ ಕಲುಷಿತ ವಾತಾವರಣದಲ್ಲಿ ಈ ಗ್ರಂಥವು ವೀರಶೈವ ಸಮಾಜಕ್ಕೆ ಅವಶ್ಯ. ಇದರಿಂದ ವೀರಶೈವಮತಸ್ಥಾಪಕರಾದ ಜಗದ್ಗುರು ಪಂಚಾಚಾರ್ಯರ ಹಾಗೂ ಬಸವಣ್ಣನವರ ಸ್ಥಾನಮಾನ, ಗೌರವ, ಘನತೆ, ಎಷ್ಟರಮಟ್ಟಿಗೆ ಎಂಬುದನ್ನು ಸಮಾಜ ನಿಚ್ಚಳವಾಗಿ ಅರಿತುಕೊಂಡು ತಮ್ಮಲ್ಲಿಯ ತಪ್ಪುತಿಳುವಳಿಕೆಯಿಂ ದುಂಟಾದ ದ್ವೇಷಾಸೂಯೆಗಳನ್ನು ಬಿಟ್ಟು ಗುರು ಜಂಗಮರಲ್ಲಿ ನಿಜವಾದ ಭಯಭಕ್ತಿಯನ್ನಿಟ್ಟು ನಡೆಯಲು ಅನುಕೂಲವಾಗಿದೆ. ಈ ಗ್ರಂಥವು ಜಂಗಮ ಕುಲವಿಲ್ಲ, ಎಲ್ಲರಿಗೂ ಜಂಗಮರಾಗಲು ಬರುತ್ತದೆ ಎಂದು ಬೋಧಿಸುವ ಜಂಗಮ ದ್ರೋಹಿಗಳಿಗೆ ರಾಮಬಾಣದಂತಿದೆ. ಅಲ್ಲದೆ ಬಸ ವಣ್ಣನವರಿಂದಲೇ ವೀರಶೈವಮತವು ಉದಯಿಸಿತೆಂದು ಹೇಳುವ ಜ್ಞಾನ

ಹೀನ ಕುರುಡರಿಗೆ ನಿಜಹಾದಿಯನ್ನು ತೋರಿಸುವ ಕೈಕೋಲಾಗಿದೆ. ಈ ಗ್ರಂಥವನ್ನೋದುವವರಿಗೆ ವೀರಶೈವಮತಸ್ಥಾಪಕರಾದ ಪಂಚಾಚಾರ್ಯರ ಮತೋದ್ಧಾರಕ ಭಸವಣ್ಣನವರ, ವೀರಶೈವಮತದ ಪ್ರಾಚೀನತೆಯು, ಗುರು ಶಿಷ್ಯರ ವಂಶಪರಂಪರೆಯು ನಿಜವಾದ ಅರಿವು ಉಂಟಾಗದೆ ಇರದು. ಐತಿಹಾಸಿಕ, ಶಿಲಾಶಾಸನ, ಹಿಂದಿನಕವಿಗಳು ರಚಿಸಿದ ಪುರಾಣ, ವಚನ, ಇವುಗಳನ್ನೆಲ್ಲಾ ಪ್ರಮಾಣವನ್ನಾಗಿ ಉದಾಹರಿಸಿ ಈ ಗ್ರಂಥವನ್ನು ರಚಿಸಿದ ಶ್ರೀ ಸನ್ನಿಧಿಯವರಿಗೆ ವೀರಶೈವಸಮಾಜವೇ ಚಿರಋಣಿಯಾಗಿದೆ.

---

## ಲೋಕಾರಾಧ್ಯ ಬಸವಣ್ಣ ಗ್ರಂಥದ ಬಗ್ಗೆ ದಾವಣಗೆರೆ ಹಳೆಕೋಟ್ಟೂರು ಬಸವಪ್ಪನವರಿಗೆ ಉತ್ತರ ಬರೆದವರು:—

**ಆಸ್ಥಾನ ವಿದ್ವಾನ, ಸಾಹಿತ್ಯವಾರಿಧಿ, ಪ್ರವಚನ ಪಂಚಾನನ, ಉಭಯ ಕವಿಭೂಷಣ,**

**ತಾಳೂರ ಬೃಹನ್ಮಠದ ಬಸವರಾಜಶಾಸ್ತ್ರಿಗಳು,**

**ಪ್ರಧಾನ ಕನ್ನಡ ಪಂಡಿತರು, ವಾರ್ಡ್ಲಾ ಉನ್ನತ ಪ್ರೌಢ ಪಾಠಶಾಲೆ ಬಳ್ಳಾರಿ.**

ಇಂಗ್ಲಿಷ್ ಸಾಹಿತ್ಯದಲ್ಲಿ Truth is God, Goodness is God, ಎಂಬ ನಾಣ್ಣುಡಿಗಳು ಸುಪ್ರಸಿದ್ಧ. ಹಾಗೆಯೆ ಸಂಸ್ಕೃತ ಸಾಹಿತ್ಯದಲ್ಲಿ ಸತ್ಯಾನ್ನಾಸ್ತಿ ಪರೋಧರ್ಮಃ ಎಂಬುದು ಸುಭಾಷಿತ. ಕನ್ನಡ ಸಾಹಿತ್ಯ ಡಲ್ಲಿ ಹರನೆಂಬುದು ಸತ್ಯ. ಸತ್ಯವೆಂಬುದೆ ಹರನು ಎಂದು ರಾಘವಾಂಕ ಪಂಡಿತನು ಘಂಟಾಘೋಷವಾಗಿ ಹೇಳಿರುವನು. ಈ ವಿಷಯದಲ್ಲಿ ಅನಾದಿ ಕಾಲದಿಂಡಲೂ, ಏಕಮುಖವಾದ ಅಭಿಪ್ರಾಯವಿದೆ. ಇದಕ್ಕೆ ಶ್ರೀಶೈಲ ಜಗದ್ಗುರುಗಳು ಬರೆದ "ಲೋಕಾರಾಧ್ಯ ಬಸವಣ್ಣ" ಎಂಬ ಗ್ರಂಥವು ಸಾಕ್ಷಿಯಾಗಿದೆ. ತ್ರಿಕಾಲಾಬಾಧಿತವೆಂದು ತಿಳಿದುದು ಮೂಲ ಗ್ರಂಥಗಳಿಂದ ತಪ್ಪಾಗಿ ಕಂಡಾಗ ಅದು ಅಸತ್ಯವಾಗುತ್ತದೆ. ಅಂತಹ ಅಸತ್ಯವನ್ನು

ಸಕಾರಣವಾಗಿ ಖಂಡಿಸಿ ಸತ್ಯವನ್ನು ಹೊರಚೆಲ್ಲಬೇಕು. ಆ ಕಾರ್ಯವನ್ನು "ಲೋಕಾರಾಧ್ಯ ಬಸವಣ್ಣ" ಎಂಬ ಗ್ರಂಥವು ಸಾಧಿಸಿದೆ. ಗುಪ್ತವಾದ ಸತ್ಯವನ್ನು ಎತ್ತಿಹಿಡಿದಿರುವುದರಿಂದ ಇದು ಸತ್ಯಂ ಶಿವಂ ಸುಂದರಂ ಎನಿಸಿದೆ. ಇದು ಒಳನೋಟಕ್ಕೂ ಹೊರನೋಟಕ್ಕೂ ಬಸವಣ್ಣನವರ ಹಿರಿಮೆಯನ್ನು ಎತ್ತಿಹಿಡಿದು ಅವರ ಬಗ್ಗೆ ಇಲ್ಲಿಯವರೆಗೆ ಜನತೆಯಲ್ಲಿದ್ದಂತಹ ತಪ್ಪನ್ನು ತಿದ್ದಿ ಸರಿಯಾದ ತಿಳುವಳಿಕೆಯನ್ನು ನೀಡಲು ಪ್ರಯತ್ನಿಸಿದೆ. ತಪ್ಪಾದ ದೃಷ್ಟಿಕೋಣದಿಂದ ಇದನ್ನು ಅವಲೋಕಿಸಿದವರಿಗೆ ಮಾತ್ರ ಹಾಗೆ ಕಾಣಬಹುದು. ಕಪ್ಪುಕನ್ನಡಕ ಹಾಕಿಕೊಂಡು ನೋಡಿ ಬೆಳ್ಳಗೆ ಕಾಣಲಿಲ್ಲವೆಂದರೆ ಹೇಗೆ? ಒಪ್ಪಾದ ದೃಷ್ಟಿಯಿಂದ ನೋಡಿದಲ್ಲಿ ಇವರೇ ಒಪ್ಪಿಕೊಳ್ಳುವಂತಿದೆ. ಈ ದೃಷ್ಟಿಯಿಂದ ಸಾಗಿದರೆ ಮಾತ್ರ ಇಡೀ ವೀರಶೈವ ಸಮಾಜಕ್ಕೆ ಕಲ್ಯಾಣವಾದೀತು. ವಿಪರೀತಬುದ್ಧಿಯಿಂದ ವಿಮರ್ಶಿಸಿ ಅಪವಾದವೆಂದರೆ ಸೂರ್ಯಕಿರಣಕ್ಕೆ ಮಣ್ಣೆರಚಲು ಹೋಗಿ ಮುಖದಮೇಲೆ ಹಾಕಿಕೊಂಡಂತೆಯೇಸರಿ.



## ಕರ್ನಾಟಕ ಇತಿಹಾಸ ಸಂಶೋಧನಮಂಡಲದ ಸುವರ್ಣಮಹೋತ್ಸವ, ಧಾರವಾಡ.

ಧಾರವಾಡದಲ್ಲಿ ಪ್ರಾಚ್ಯವಸ್ತು ಸಂಶೋಧನಾಧಿಕಾರಿಗಳಾದ ಶ್ರೀ ಎಸ್. ಆರ್. ರಾವ್‌ಅವರು ದಿನಾಂಕ ೧–೭–೧೯೭೦ ರಂದು ಭಾಷಣ ಮಾಡುತ್ತ ಕಾವ್ಯ ಮತ್ತು ಪುರಾಣಗಳ ಬಗ್ಗೆ ಈ ಕೆಳಗಿನಂತೆ ತಮ್ಮ ಅಭಿಪ್ರಾಯವನ್ನು ಸ್ಪಷ್ಟಗೊಳಿಸಿದರು.

ಸಂಯುಕ್ತ ಕರ್ನಾಟಕ ದಿ. ೨–೭–೭೦ ಸಂಪುಟ ೩೮ ಸಂಚಿಕೆ ೫೫

ಕತ್ತಲೆಯ ಕಾಲಾವಧಿಯ ಐತಿಹಾಸಿಕ ಘಟನೆಗಳ ಬಗ್ಗೆ ಪುರಾಣಗಳು ಮತ್ತು ಮಹಾಕಾವ್ಯಗಳು ಮಹತ್ವದ ವಿವರಗಳನ್ನು ಒದಗಿಸುವವು. ಇವು ಕೇವಲ ಕಾಲ್ಪನಿಕ ಹಾಗು ದಂತಕಥೆಗಳೆಂದು ಭಾವಿಸಿ ತಿರಸ್ಕರಿಸುವದು ಯೋಗ್ಯ ಕ್ರಮವಲ್ಲ.

*　　*　　*　　*

ಡಾ॥ ಶ್ರೀ ಎಸ್. ಸಿ ನಂದಿಮಠರವರು ಮೇಲ್ಕಂಡ ಕರ್ನಾಟಕ ಇತಿಹಾಸ ಸಂಶೋಧನಾ ಮಂಡಳದ ಸುವರ್ಣಮಹೋತ್ಸವ ಸಂದರ್ಭದಲ್ಲಿ ಇತಿಹಾಸ ಪರಿಷತ್ತನ್ನು ಉದ್ಘಾಟಿಸುತ್ತ ಈ ಕೆಳಗಿನಂತೆ ಭಾಷಣ ಮಾಡಿದರು:-

ಇತಿಹಾಸವನ್ನು ಪುನರ್‌ರಚಿಸಬೇಕು ಎಂದು ಉದ್ಗಾರ ತೆಗೆದು ನಮ್ಮ ಪ್ರಾಚೀನ ಗ್ರಂಥಗಳನ್ನು ಕೇವಲ ಸಾಹಿತ್ಯ ಕೃತಿಗಳೆಂದು ಮಾತ್ರ ಪರಿಗಣಿಸದೆ ಅವುಗಳನ್ನು ಐತಿಹಾಸಿಕ ದೃಷ್ಟಿಯಿಂದ ಅಭ್ಯಸಿಸಬೇಕು ಎಂತಲೂ,

ಇಂಗ್ಲೀಷರು ಭಾರತಕ್ಕೆ ಬಂದಾಗ ಇಲ್ಲಿ ಇತಿಹಾಸವನ್ನು ಸರಿಯಾಗಿ ಬರೆದಿಲ್ಲ ಎಂತಲೂ ನಮ್ಮ ಇತಿಹಾಸವನ್ನು ಅವರು ಕಟ್ಟುಕಥೆಗಳು ಮತ್ತು ದಂತಕಥೆಗಳೆಂದು ಕರೆದರು. ಆದರೆ ಅದು ನಮ್ಮ ಇತಿಹಾಸಬರೆಯುವ ಪದ್ಧತಿಯಾಗಿದ್ದಿತು. ಎಂದು ಸ್ಪಷ್ಟಪಡಿಸಿದರು.

+　　+　　+　　+

ಪುರಾಣಾಧಾರಗಳು ಸತ್ಯದೂರವಾದುವೆಂತಲೂ ಇತಿಹಾಸಸಮ್ಮತವಾದವುಗಳಲ್ಲವೆಂತಲೂ ಟೀಕಿಸುವವರು ಮೇಲ್ಕಂಡ ಇತಿಹಾಸ ಸಂಶೋಧನಾ ಪಂಡಿತರ ಅಭಿಪ್ರಾಯಗಳನ್ನು ಕಣ್ದೆರೆದು ನೋಡಬೇಕು.

ಲೋಕಾರಾಧ್ಯ ಬಸವಣ್ಣ ಗ್ರಂಥಕರ್ತರು.

## —: ವಿಕ್ರಯಕ್ಕೆ ಸಿದ್ಧವಾಗಿರುವ ಗ್ರಂಥಗಳು :—



| | | | |
|---|---|---|---|
| ೧) | ಶ್ರೀಶೈಲ ಜಗದ್ಗುರು ವಾಗೀಶ ಪಂಡಿತಾರಾಧ್ಯ ಚರಿತ್ರೆ | | ೪—೦೦ |
| ೨) | do ,, ಸಂಕ್ಷಿಪ್ತ ಚರಿತ್ರೆ | | ೦—೫೦ |
| ೩) | ವಿಶ್ವಧರ್ಮವಾದ ವೀರಶೈವ | | ೦—೫೦ |
| ೪) | ಸಿದ್ಧಾಂತಶಿಖಾಮಣಿಯ ಸತ್ಯಾರ್ಥ ಪ್ರಕಾಶ | | ೦—೫೦ |
| ೫) | ವೀರಶೈವಾಚಾರ | | ೦—೨೫ |
| ೬) | ಮಲ್ಲಿಕಾರ್ಜುನ ಸುಪ್ರಭಾತ | [ಕನ್ನಡ, ಸಂಸ್ಕೃತ] | ೦—೫೦ |
| ೭) | do ,, | [ತೆಲುಗು] | ೦—೨೫ |
| ೮) | ವಾಗೀಶ ಕಾವ್ಯಮಾಲೆ | | ೦—೫೦ |
| ೯) | ಶ್ರೀಶೈಲ ಕ್ಷೇತ್ರ ನಿರ್ಣಯ | [ತೆಲುಗು] | ೦—೨೫ |
| ೧೦) | ವೀರಶೈವಮು | [ತೆಲುಗು] | ೦—೫೦ |
| ೧೧) | ಭಕ್ತಿಕುಸುಮಾಂಜಲಿ | ,, | ೧—೦೦ |
| ೧೨) | ವೀರಶೈವ ಸಿದ್ಧಾಂತ ಚಂದ್ರಿಕಾ | [ತೆಲುಗು] | ೨—೦೦ |
| ೧೩) | ಸಿದ್ಧಾಂತಶಿಖಾಮಣಿ ಮೂಲ | ,, | ೦—೫೦ |
| ೧೪) | ಮುಮುಳಸಿದ್ಧಾಂಕ | [ಕನ್ನಡ] | ೩—೦೦ |
| ೧೫) | ಲೋಕಾರಾಧ್ಯ ಬಸವಣ್ಣ | ,, | ೧—೦೦ |
| ೧೬) | do | [ತೆಲುಗು] | ೧—೦೦ |
| ೧೭) | ಶ್ರೀಶೈಲಜಗದ್ಗುರು ವಾಗೀಶ ಪಂಡಿತಾರಾಧ್ಯ ವಿಜಯ | | ೧—೦೦ |
| ೧೮) | ಶ್ರೀಶೈಲ ಜಗದ್ಗುರುಗಳ ಬಣ್ಣದ ಫೋಟೋ | | ೦—೫೦ |
| ೧೯) | ಕನ್ನಡ ಲೋಕಾರಾಧ್ಯ ಬಸವಣ್ಣ ೨ ನೆ ಭಾಗ | | ೧—೦೦ |

ವಿಳಾಸ,

ಶ್ರೀ ಶೈಲಜಗದ್ಗುರು ಸೂರ್ಯ ಸಿಂಹಾಸನ ಪಂಡಿತಾರಾಧ್ಯಪೀಠ
ಮುಕ್ಕಾಂ। ಪೋಸ್ಟ್। ಶ್ರೀ ಶೈಲಂ
ಜಿಲ್ಲಾ। ಕರ್ನೂಲ [ಆಂಧ್ರಪ್ರದೇಶ]